# ಪಂಚಮುಖಿ

(ಐದು ಪ್ರಬಂಧಗಳು)

ಬಿ. ಎಚ್. ಶ್ರೀಧರ, ಎಂ. ಎ.

1955

ಅಂತರಂಗ ಕಾರ್ಯಾಲಯ, ಉಡುಪಿ.

0—5—0

— ಪರಿವಿಡಿ —





ಮುದ್ರಕರು:
ನವಯುಗ ಪ್ರೆಸ್, ಉಡುಪಿ.

# ಪಂಚಮುಖಿ

* * * *

## ೧ ಕನ್ನಡದ ಜೀವನ ಸೂತ್ರ

ಮಾನವ ಕುಲವು ಪ್ರಕೃತ್ಯಾಪ್ರಗತಿಪರವಾದುದು. ವಿಘ್ನ ಪರಂಪರೆಗಳಿಂದ ಅದರ ಮುನ್ನಡೆ ಕೆಲಕಾಲ ಕುಂಠಿತವಾದಂತೆ ಕಂಡುಬರಬಹುದು; ಆದರೆ ಸೋಲುಗೆಲುವಿನ ಮೆಟ್ಟಲೆಂಬ ಮಾತಿನಂತೆ ಪುನಃ ಚೇತರಿಸಿಕೊಂಡು ಪುರೋಗಾಮಿಯಾಗುವುದು. ಅದಕ್ಕೆ ಸ್ವಭಾವ ಸಹಜವಾದದ್ದು. ಹೀಗೆ ಮುನ್ನಡೆ ಮುಂದೋಟ ಮಾನವ ಕುಲದ ಆದರ್ಶ. ಈ ಮುನ್ನಡೆಯಲ್ಲಿ, ಮುಂಬರಿವಿನಲ್ಲಿ ಧ್ರುವತಾರೆಯಂತೆ ಮಾರ್ಗದರ್ಶಕವಾದುದೆಂದರೆ ವ್ಯಕ್ತಿ ವ್ಯಕ್ತಿಗಳ ಸಹಕಾರ. ಮಹಾಯುದ್ಧಗಳೆಷ್ಟೋ ಆಗಿ ಹೋದವು; ಆದರೆ ಮತ್ತೆ ಮತ್ತೆ ಜಗತ್ತು ಒಕ್ಕೂಟ, ಒಮ್ಮತ, ಸಹಕಾರ ತತ್ವಗಳನ್ನು ಹಿಡಿಯಲು ಪ್ರಯತ್ನಿಸುತ್ತಲೇ ನಡೆದಿದೆ. ಇಂದು ಸಂಸ್ಕೃತ ಮಾನವನ ದೃಷ್ಟಿ ವಿಶ್ವವಿಶಾಲವಾಗಿದೆ;ಅವಯುವಗಳ ಸಾಮಂಜಸ್ಯದಿಂದ ಅವಯುವಿ ಸಮಂಜಸವೆನಿಸುವುದೆಂಬ ತತ್ವವನ್ನು ಅರಿತು ಆ ಕೋನದಿಂದ ಜಗತ್ತನ್ನು ನೋಡುತ್ತಿದೆ. ಮಣಿಗಣಗಳನ್ನು ಸೂತ್ರವೊಂದು ಕ್ರಮವಾಗಿ ಪವಣಿಸಿ ಹಿಡಿದಿರುವಂತೆ ಮಾನವ ಕೋಟಿಯು ಭ್ರಾತೃಭಾವ ಅಸಂತೋಷ ಸಂತೋಷಗಳ ನಡುವೆ,ಘರ್ಷಣಾಮರ್ಷಣಗಳಮೂಲಕ, ದಂಗೆ ಶಾಂತಿ ಸ್ಥಾಪನೆಗಳೊಳಗೆ, ತಕರಾರು ಕರಾರುಗಳ ಮೂಲಕ ದೃಢಪಡುತ್ತ ಹೋಗಿದೆ. ಈ ಅನಾದಿ ಪ್ರಯತ್ನದ ಅಂತ್ಯಸಿದ್ಧಿಗೆ ಸೂತ್ರಪ್ರಾಯವಾದುದೆಂದರೆ ಐಕ್ಯಸಂಬಂಧ. ಒಡೆದ ಗಾಜಿನ ಎರಡು ಚೂರುಗಳು ಸರಿಯಾಗಿ ಜೋಡಿಸಲ್ಪಟ್ಟರೆ ತಮ್ಮ ತಮ್ಮ ವಕ್ರಮುಖಗಳ ಸಂಯೋಗದಿಂದಲೇ ಶ್ರೀಮುಖವಾಗುವಂತೆ ವ್ಯಕ್ತಿತ್ವ, ವರ್ಗತ್ವ, ರಾಷ್ಟ್ರತ್ವ ಮುಂತಾದ ಭಿನ್ನ ಮುಖಗಳೊಂದಾದರೆ, ಹೊಂದಿಕೊಂಡು ಹೋದರೆ ಮಾನವತ್ವ, ಪ್ರಪಂಚತ್ವಗಳು ಸಾಧಿಸಲ್ಪಡುವುವು. ಈ ಆಧುನಿಕ ವಿಜ್ಞಾನ ಮಾರ್ಗವನ್ನು ಕಣ್ಣೆದುರಿಟ್ಟುಕೊಂಡು ಪ್ರತಿಯೊಂದು ಜನಪದವೂ ಜಗದ ಸುಶ್ಲಿಷ್ಟ ಅಂಗವಾಗಿ ಬಾಳಲು ಪ್ರಯತ್ನಿಸುವುದೇ ಉತ್ತರೋತ್ತರವಾದ ಪ್ರಗತಿಯೆನ್ನಬಹುದು.

## ರಾಜಕೀಯ ಐಕ್ಯ

ಅಂಗಿಯ ಪರಿಧಿಯೊಳಗೆ ಅಂಗಗಳಿರುವಂತೆ ಜೀವನದ ವ
ಣದೊಳಗೆ ಅನೇಕ ಒಳ ಆವರಣಗಳಿವೆ. ಅಂತಹವುಗಳಲ್ಲಿ ಕ
ದೃಷ್ಟಿಯಿಂದ, ವ್ಯಾಪ್ತಿಯ ಮರ್ಯಾದೆಯಿಂದ ಮೊದಲು ಕಾ
ರಾಜಕೀಯ ಆವರಣ. ಅನಾದಿಕಾಲದಿಂದ ಇಂದಿನ ವರೆಗ
ಪ್ರಾಧಾನ್ಯವಿದ್ದೇ ಇದೆ; ವಿಶೇಷ ಸಂದರ್ಭಗಳಲ್ಲಿ ವಿಶೇಷವಾಗಿ ಪ
ಪಡೆಯುತ್ತದೆ. ಅದರಿಂದಲೇ ಇಂದು ಪ್ರತಿಯೊಂದು ರಾ
ಪ್ರಾಂತ್ಯವೂ ಪ್ರದೇಶವೂ ಜೀವನದ ಉಳಿದ ಆವರಣಗಳ ಸಾಮ
ರಾಜಕೀಯ ಆವರಣವೇ ತಳಹದಿಯೆಂಬುದನ್ನರಿತು ಅದನ್ನು ಎ
ಮೊದಲು ಸುಧಾರಿಸಲು, ಅನುಕೂಲವಾಗಿ ಪರಿವರ್ತಿಸಲು ವಿಶೇಷ
ಕೊಡುತ್ತಿದೆ. 'ರಾಜಾಕಾಲಸ್ಯಕಾರಣಂ' ಎಂಬುದಕ್ಕೆ ಬಹಳ
ರ್ಥವಿದೆ. ಆರಸನೊಬ್ಬನಿರಲಿ, ಹತ್ತುಮಂದಿ ಪ್ರತಿನಿಧಿಗಳ
ರಲಿ-ಸಾಂಕುಶ ಪ್ರಭುತ್ವವಿರಲಿ, ನಿರಂಕುಶವಿರಲಿ-ಜೀವನದ
ದಂಡದಂತಿರುವ ಉದ್ಯೋಗಾದಿಗಳ ಸುವ್ಯವಸ್ಥೆಗೆ ರಾಜಾಧಿಕಾ
ಕಾರ ನಿಯಂತ್ರಣ ಅಗತ್ಯವಿರುವುದರಿಂದ ಅತ್ತ ಜನ ಹೆಚ್ಚು
ಲಕ್ಷ್ಯವೀಯುತ್ತಿರುವುದು ಸ್ವಾಭಾವಿಕ. ತ್ರಿಕರಣಗಳಿಂದ ವ್ಯ
ಬ್ಬನು ಮಾಡುವ ಕಾರ್ಯಗಳನ್ನು ತಡೆಹಿಡಿವ ಇಲ್ಲವೆ ಪ್ರೋತ್ಸಾ
ಶಕ್ತಿಯೇ ರಾಜಶಕ್ತಿಯೆಂಬುದು ಸರ್ವದಾ ಅನುಭವಗಮ್ಯವ
ಯುದ್ಧಾದಿ ಗಂಡಾಂತರ ಪರಿಸ್ಥಿತಿಗಳಲ್ಲಿ ವಿಶೇಷತಃ ನಾಗರಿಕರ
ವಕ್ಕೆ ಬರುತ್ತದೆಂಬುದನ್ನು ಸರ್ವರೂ ಬಲ್ಲರು. ಆದುದರಿಂದ
ದೇಶ, ಪ್ರಾಂತ, ಶಾಂತಿ ಸಮೃದ್ಧಿಗಳನ್ನು ಪಡೆಯಬೇಕಾದರೆ
ಮೊದಲನೆಯದು ರಾಜಕೀಯ ಉಪಾಧಿಯ ಅನುಕೂಲವೃತ್ತಿಯೆ
ನಿರ್ವಿವಾದವಾದುದು.

ಮೇಲಿನ ಮಾತಿನ ಸತ್ಯತೆಗೆ ಹಿಂದುಸ್ತಾನವಿಂದು ಮುಸ
ರಿಗೆ ಪಾಲುಕೊಟ್ಟಾದರೂ, ಸ್ವಾತಂತ್ರ್ಯ ಪಡೆಯಲೊಪ್ಪಿ ಆಡಳಿತ
ಕಾರವನ್ನು ಸಂಪಾದಿಸಿದುದೇ ಸಾಕ್ಷಿ. ಜಗತ್ತಿಗೆ ರಾಷ್ಟ್ರಗಳಂಗ
ರಾಷ್ಟ್ರಕ್ಕೆ ಅಥವಾ ದೇಶಕ್ಕೆ ಪ್ರಾಂತಗಳಂಗಗಳು. ಹಾಗಿರುವಾ

ಪಾಲಿಗೆ ಬರತಕ್ಕ ಸ್ವಾತಂತ್ರ್ಯವನ್ನು ಪ್ರತಿಯೊಂದು ಪ್ರಾಂತವೂ ಪಡೆಯುತ್ತದೆ, ಪಡೆಯಬೇಕಾಗುತ್ತದೆ. ಈ ನ್ಯಾಯವನ್ನು ಅನುಸರಿಸಿಯೇ ಭಾಷವಾರು ಪ್ರಾಂತರಚನೆಗಿಂದು ಮಹತ್ವ ಪ್ರಾಪ್ತಿಯಾಗಿದೆ. ಜಗತ್ತಿನ ವಿವಿಧ ಪ್ರಾಕೃತಿಕ ಶಕ್ತಿಗಳಲ್ಲಿ ವಾಯುವಿಗಿರುವ ಬಲ ಮತ್ತು ನೈರ್ಮಲ್ಯಗಳು ಉಳಿದವಕ್ಕಿಲ್ಲ. ಹಾಗೆಯೇ ಪ್ರಾಂತ ನಿರ್ಮಾಣಕ್ಕೆ ಜಾತಿ ಧರ್ಮ ಮುಂತಾದ ಅನೇಕ ತತ್ವಗಳಿದ್ದರೂ ಅವೆಲ್ಲವುಗಳಿಂದ ಪ್ರಬಲವೂ ನಿರ್ಮಲವೂ ವೈಜ್ಞಾನಿಕವೂ ಆದುದೆಂದರೆ ಭಾಷಾತತ್ವ. ಅದನ್ನು ಕಡೆಗಣಿಸಿದ್ದರಿಂದ ಉಳಿದ ಪ್ರಾಂತಗಳಿಗಿಂತ ದೀನರೂ ಹೀನರೂ ಆಗಿ ಬಾಳಬೇಕಾಗಿ ಬಂದಿರುವ ಕರ್ನಾಟಕ ಜನರ ಗತಿ ಇಂದು ಕರುಣಾಜನಕವಾಗಿದೆ. ದೇಹಕ್ಕೆ ಅಗತ್ಯವಾದ ವಸ್ತುಗಳಲ್ಲಿ ಗಾಳಿ ಹೇಗೆ ಪ್ರಥಮದ್ದೋ ಹಾಗೇ ವ್ಯಕ್ತಿಗಳ ನಿತ್ಯ ವ್ಯವಹಾರದಲ್ಲಿ ಭಾಷೆ ಪ್ರಧಾನವಾದದ್ದು. ಪ್ರದರ್ಶನೀಯವಾದ ಬಾಹ್ಯ ಧರ್ಮಾಚಾರ ಪದ್ಧತಿಗಳಿಂದ ಏಳಿಗೆಗೆ ಹೇಗೆ ಭಂಗ ಬರುವುದೆಂಬುದಕ್ಕೆ ಇಂದಿನ ಪಾಕಿಸ್ತಾನ ಸ್ಥಾಪನೆಯು ಹಿಮಾಲಯೋಪಮವಾದ ನಿದರ್ಶನವಾಗಿದೆನಮ್ಮ ಸನಾತನಿಗಳ ಕಣ್ಣು ಇದರಿಂದಲೂ ತೆರೆಯದೆ ಹೋದರೆ ಅವರು ಈ ಯುಗದಲ್ಲಿ, ಈ ಜಗದಲ್ಲಿ ಬದುಕಿಲ್ಲವೆಂದೇ ಹೇಳಬೇಕು. ವರ್ಗದ ಮಾತೆತ್ತಿದರೆ ಗಾಂಧೀಜಿ ಇಂದು ವರ್ಣರಹಿತ ಹಿಂದು ಜಾತಿಯನ್ನು ನಿರ್ಮಿಸಬೇಕೆಂಬ ಆಧುನಿಕ ವಿಜ್ಞಾನ ರಹಸ್ಯವನ್ನರಿತುಕೊಳ್ಳಬೇಕಾಗುವುದು. ಭಾಷಾಖಂಡದೊಳಗೆ ಸಂಸ್ಕೃತಿ, ಅದರೊಳಗೆ ಧರ್ಮಕರ್ಮಗಳು, ಅವುಗಳೊಳಗೆ ಕೌಟುಂಬಿಕ ಆಚಾರ ವ್ಯವಹಾರಗಳು, ಹೀಗಿರುವುದರಿಂದ ಭಾಷಾವಾರನ್ನೇ, ಪ್ರಾಂತ ಪರಿಧಿಯನ್ನಾಗಿ ಮಾಡಬೇಕೆಂಬ ಯೋಜನೆ ಇಂದು ಮುಂಬಂದಿದೆ.

ರಾಜಭಾಷೆ ಅನ್ಯವಾಗಿ ಉಳಿದುದರಿಂದಲೇ ನಮ್ಮ ಪ್ರಾಂತ ಭಾಷೆಗಳಿಂದು ಆಗಬೇಕಾದಷ್ಟು ಪುಷ್ಟಿಯಾಗಿಲ್ಲ; ಸಾಹಿತ್ಯವು ಪೂರ್ಣವಾಗಿಲ್ಲ. ಬಾಯಿಬಿಟ್ಟರೆ ಬಣ್ಣಗೇಡು—ಎಂಬ ಪಾಡಾಗಿದೆ. ರಾಜೋದ್ದೇಶ ಬೇರೆಯಾದುದರಿಂದಲೇ ಪ್ರಾಂತಗಳ ಉದ್ಯೋಗ ಶಿಕ್ಷಣಾದಿಗಳು ಸಶಕ್ತ ಜನಪದವನ್ನು ನಿರ್ಮಿಸಿಲ್ಲ. ಅಧಿಕಾರೇತರ ಸಂಸ್ಥೆಗಳು ಎಷ್ಟೇ ಹೆಣಗಿದರೂ ಕನ್ನಡ ಸಮಾಜ, ಸಾಹಿತ್ಯ ಸಂಸ್ಕೃತಿಗಳು ಸಾಮರಸ್ಯ

ಹೊಂದಿಲ್ಲ; ಅಭಿವೃದ್ಧಿ ಹೊಂದಲಿಲ್ಲ. ಅದನ್ನರಿತೇ ಕನ್ನಡಿಗರಿ
ಕೀಯ ಒಕ್ಕೂಟವನ್ನು ತಮ್ಮ ಪ್ರಥಮ ಸಾಧ್ಯವೆಂದು ಗ್ರ
ಇದರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಆದೀತು. ಸ
ಸರ್ವಭಾಗದ ಕನ್ನಡಿಗರೂ ಈ ವಿಷಯದಲ್ಲಿ ಎಚ್ಚತ್ತಿರುವುದ
ಹೆಚ್ಚಾಗಿ ಬಿಂಬಿಸಬೇಕಾಗಿಲ್ಲ. ಕಾರ್ಯ ಮುಂದೆ ಸಾಗಬ
ಸಾಗುತ್ತಿದೆ.

### ಆರ್ಥಿಕ ಮುನ್ನಡೆ

ಆರ್ಥಿಕ ವಿತರಣದ ದೃಷ್ಟಿಯಿಂದ ಜಗತ್ತಿಂದು ಇಬ್ಭಾ
ಇಮ್ಮತವಾಗಿದೆ. 'ಬಲವೇ ನ್ಯಾಯ'ವೆಂಬ ಮತದ ಮೇಲೆ
ವ್ಯಕ್ತಿ ಇಲ್ಲವೆ ಒಂದು ಗುಂಪು ಸ್ವಶಕ್ತಿಯನ್ನು ಪ್ರಯೋಗಿಸಿ ಅ
ಲವಕಾಶಕೊಡಬೇಕೆಂಬ ಬಂಡವಾಲಶಾಹಿಯೊಂದು ಕಡೆ,
ಮತ್ತು ಅದರ ಫಲಗಳ ಭೋಕ್ತೃಗಳು ಕೇವಲ ಕೆಲವರು
ಹಲವರಲ್ಲ, ಎಲ್ಲರೂ ಎಂಬ ಸಮಾಜ ಅಥವಾ ಸಾಮ್ಯವಾದ ಮ
ಕಡೆ—ಈ ಎರಡು ಮುಖಗಳಿಂದ ಪ್ರಜಾಪ್ರಭುತ್ವ ಬೆಳೆದು
ಇದರಿಂದಲೇ ಯುರೋಪಿನಲ್ಲಿ ಪೂರ್ವ ಹಾಗೂ ಪಶ್ಚಿಮ ಪ್ರ
ಗಳೆಂದು ಇಗ್ಗುಂಪಾಗಿವೆ. ನಮ್ಮ ನಯಜ್ಞರು ಎಲ್ಲ ವ್ಯವಹಾ
ಸ್ವಲ್ಪ ಜನರ ಬಹು ಸುಖಕ್ಕಿಂತ ಬಹುಜನರ ಸ್ವಲ್ಪ ಸುಖವೇ ಲ
ನಮಗೆ ಮೊದಲಿಂದ ಕಲಿಸಿದ್ದಾರೆ. ಒಬ್ಬನಿಗೆ ಹೊಟ್ಟೆ ತ
ದಕ್ಕಿಂತ ಇಬ್ಬರು ಅರೆಹೊಟ್ಟೆ ತುಂಬಿಸಿಕೊಳ್ಳುವುದೇ ಲೇಸೆಂದ
ವಿಶಾರದರೊಪ್ಪುವರು. ಎಲ್ಲರೂ ಬಹು ಸುಖಿಗಳಾದರಂತೂ
ಸಂತೋಷ. ಹೇಗೇ ಆಗಲಿ, ಅಲ್ಪಸಂಖ್ಯರ ಬಹು ಸುಖಕ್ಕಾಗಿ
ಸಂಖ್ಯರು ಅಲ್ಪ ಸುಖ ಇಲ್ಲವೆ ಅಸುಖಪಡುವ ಬಂಡವಾಲ
ನೆರಳು ಭಾರತೀಯ ಸಂಸ್ಕೃತಿಗೆ ಒಪ್ಪುವಂಥದಲ್ಲ; ಕೇವಲ
ನಾಸ್ಪದವಾದುದೇ ಸರಿ.

ಹಿಂದೆ ಹೇಳಿದ ರಾಜಕೀಯ ಐಕ್ಯಕ್ಕೆ ಈ ರಾಷ್ಟ್ರೀಕರಣ
ಸಮೀಕರಣ ತತ್ವವು [ಸಾಮ್ಯವಾದ] ಬೆನ್ನು ಮೂಳೆಯಂತಿದೆ.
ವರ್ಗಗಳಿರುವುದು ಪರಸ್ಪರ ಮತ್ಸರ, ಸ್ಪರ್ಧೆ ಹಾಗೂ ದಮನ ಪ್ರ

ಗಳಿಗೆಡೆಗೊಡುವುದೆಂಬುದಕ್ಕೆ, ಸರ್ವಹಿತವನ್ನು ಕಡೆಗಣಿಸಿ ವರ್ಗಹಿತ ವಷ್ಟನ್ನೇ ನೋಡುವಂತಾಗುವುದೆಂಬುದಕ್ಕೆ, ೧ನೆಯ ಮಹಾ ಯುದ್ಧದಲ್ಲಿ ಜರ್ಮನ್ ಜ್ಯೂಗಳ ನಡತೆಯೇ ಸಾಕ್ಷಿ. ಅರ್ಥವೊಂದು ಶಕ್ತಿ, ಅದ ರಂತೆ ಅಧಿಕಾರವೂ ಒಂದು ಶಕ್ತಿ; ಇವೆರಡರಲ್ಲಿ ಯಾವುದೊಂದನ್ನೇ ಆಗಲಿ, ಹೆಚ್ಚು ಕಡಿಮೆಮಾಡಿ ಹಂಚಿ ವರ್ಗಗಳನ್ನು ಸೃಷ್ಟಿಸಿದರೆ ಸಮಾ ಜದ ಆಯುಷ್ಯವನ್ನು ಮೊದಲೇ ಕಡಿಮೆ ಮಾಡಿಟ್ಟಂತಾಗುತ್ತದೆ. ಸರ ಕಾರಿ ನೌಕರರೆಂಬ ಒಂದು ವರ್ಗ, ಸರಕಾರದವರಿಗೆ ಬೇಕಾದವರೆಂಬ ಅಲ್ಪ ಸಂಖ್ಯಾಕತೆಯ ವಿಶೇಷ ಹಕ್ಕುಳ್ಳವರದೊಂದು ವರ್ಗ, ಇವೆರಡು ನಮ್ಮ ದೇಶದ ಸ್ವಾತಂತ್ರ್ಯ ಸಾಧನೆಯಲ್ಲಿ ಎಂತಹ ಕಂಟಕಗಳಾಗಿ ಪರಿ ಣಮಿಸಿದವೆಂಬುದನ್ನು ಇಷ್ಟು ಬೇಗ ಯಾರೂ ಮರೆತಿರಲಾರರು. ವರ್ಗ ರಹಿತ ಸಮಾಜಬೇಕೆಂದು ಅಸ್ಪೃಶ್ಯೋದ್ಧಾರಕರಾದ ಗಾಂಧಿಯವರು ಹೇಳುತ್ತಾರೆ. ಹಾಗೇ ಎಂದರೆ ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆ ಗಳಲ್ಲಿ ಎಂತೋ ಅಂತು—ಆರ್ಥಿಕ ಪ್ರಮಾಣದಲ್ಲೂ "ವೈಷಮ್ಯ"ವಿರ ಕೂಡದು.

ಪ್ರಕೃತಿ ಸಹಜವಾದ ಮತ್ಸ್ಯನ್ಯಾಯವನ್ನು ಬಿಡುವಂತೆ ಮಾಡಿ ಮತ್ಸ್ಯಸದೃಶಮಾನವನು ನ್ಯಾಯವಾದ ಹಿಡಿವಂತೆ ಮಾಡುತ್ತ ಬಂದುದೇ ಸಂಸ್ಕೃತಿ ಇಲ್ಲವೆ ನಾಗರಿಕತೆ. ಆದುದರಿಂದ ಈ ನ್ಯಾಯವೇ ಬಲವೆಂಬ ನ್ಯಾಯ ಸಮ್ಮತವಾದ ಸಾಮ್ಯತತ್ವವಲ್ಲದೆ ಬಂಡವಾಲಿಗರ ಭೇದ ದೃಷ್ಟಿಯು, ವರ್ಗ ಮೂಲದ ಸಾಮ್ಯವಾದ ತತ್ವವು ಕನ್ನಡ ನಾಡಿಗೆ ಹಿತಕರವೆನಿಸದು. ಕ್ರಾಂತಿಕಾರಕ ಸಾಮ್ಯವಾದವೇ ಗುರಿಯಾದರೂ "ಕ್ರಾಂತಿಯಿಲ್ಲದೆ" ವಿವರ್ತ ಮಾರ್ಗದ ರಚನಾತ್ಮಕ ಸಾಮ್ಯ ನೀತಿಯನ್ನು ನಮ್ಮ ಭಾವೀ ಸ್ವತಂತ್ರ ಪ್ರಾಂತವು ಅನುಸರಿಸುವುದೆಂದು ಆಶಿಸುತ್ತೇನೆ.

ನಮ್ಮ ಬಂಡವಾಲಿಗರಾದರೂ ತಮ್ಮ ಹಿಂದಿನ ಸಂಕುಚಿತ ದೃಷ್ಟಿಯನ್ನು ಬಿಟ್ಟು ಸ್ವಕಾರ್ಯ ಸ್ವದೇಶಕಾರ್ಯವೆರಡಕ್ಕೂ ನ್ಯಾಯ ವಾದ ಸ್ಥಾನ ದೊರೆವಂತೆ ಸಹಕಾರ ತತ್ವದಿಂದ ಹೊಸ ಹಾಗೂ ದೊಡ್ಡ ದೊಡ್ಡ ಬಂಡವಾಲದ ವಿಶಾಲ ಕರ್ನಾಟಕದ ಆವಶ್ಯಕತೆ ಯನ್ನು ಪೂರಯಿಸುವ ವಿಶೇಷೋದ್ಯಮಗಳನ್ನು ಪ್ರಾರಂಭಿಸಿ ವ್ಯವ

ಸಾಯಕ ಮತ್ತು ಔದ್ಯೋಗಿಕ ಅಭಿವೃದ್ಧಿಯನ್ನು ಸಾ
ವಾಗುವದು ಅವರ ಕರ್ತವ್ಯ. ಕೈಗಾರಿಕೆಗಳ ಸ್ಥಾಪನೆ,
ಮತ್ತು ಉತ್ಪಾದನೆ ಇವುಗಳಲ್ಲಿ ಜಾಣರ ಜಾಣ್ಮೆಯನ್ನು ಜ
ಬಳಸಿಕೊಳ್ಳುವ ಆಧುನಿಕ ಸಾಮ್ಯ ಸಹಕಾರ ತತ್ವಗಳ
ಅಳವಡಿಸಿಕೊಳ್ಳುವುದಗತ್ಯ. ಸ್ವಾಮಿ ಭೃತ್ಯಭಾವ ಸ
ಜಾಗರೂಕತೆಯಿಂದ ಮತ್ತು ನಾಗರಿಕ ರೀತಿಯಿಂದ ನ
ಹೋಗಬೇಕಲ್ಲದೆ ಅನಾಗತ ವಿಧಾತ ಬುದ್ಧಿಯಿಂದ ಅ
ವೈಜ್ಞಾನಿಕ ಯಂತ್ರೋಪಕರಣ ಮತ್ತು ಆಧುನಿಕ ವಾಣಿ
ಇವುಗಳ ನೆರವನ್ನು ಸದಾ ಪಡೆದುಕೊಂಡು ಮುನ್ನಡಿಯಿ
ಇಲ್ಲದಿದ್ದರೆ ಕರ್ನಾಟಕವು ಇನ್ನು ಶತಮಾನ ಕಳೆವವರೆಗೆ ಗ
ಗುಂಗಿನಲ್ಲೇ, ಸ್ವಪ್ನದಲ್ಲೇ, ಸ್ತುತಿ ಪಾಠದಲ್ಲೇ, ತೃಪ್ತಿ ಹೊ
ದೀತು. ನಮ್ಮ ಪ್ರಾಂತದ ಪ್ರಾಕೃತಿಕ ವರಗಳನ್ನು ಬ
ಯಿಂದ ಬಳಸಿಕೊಂಡು ನಮ್ಮ ಜೀವನ ಮಟ್ಟವನ್ನು ಹೆಚ್ಚಿಸ
ಶಕ್ತಿಯನ್ನು ಬೆಳೆಸಬೇಕಾದರೆ ಸಾಹಸಿಕತೆ, ದೂರ ದೃಷ್ಟಿ
ಪಟುತ್ವಗಳು ನಮ್ಮ ವಣಿಗ್ವರ್ಗದಲ್ಲಿ ತಲೆದೋರಬೇಕು.
ಯರು ಮತ್ತು ಅನ್ಯಪ್ರಾಂತೀಯರು ನಮ್ಮ ಜಾಡ್ಯವನ
ಬೇಕಾದಷ್ಟು ದುರುಪಯೋಗ ಪಡಿಸಿಕೊಂಡು ದುಡ್ಡನ್ನು
ಕೊಂಡು ಹೋದುದಕ್ಕೆ ಜೀವಂತ ನಿದರ್ಶನಗಳು ಒಂದೆರಡಿ
ದರೂ ಧರ್ಮ, ಕಾಮ, ಮೋಕ್ಷಗಳಿಗೆ ತಳಹದಿಯಾದ ಅ
ಯನ್ನು ವೃದ್ಧಿಗೊಳಿಸಿಕೊಳ್ಳುವ ಪ್ರಾಂತದ ಧನಾಢ್ಯರು ಪ್ರಗ
ದುಡ್ಡನ್ನು ಬಡ್ಡಿಗೆ ಹಾಕದೆ ಉದ್ಯಮಗಳಿಗಾಗಿ ಧೈರ್ಯ
ಸಲುದ್ಯುಕ್ತರಾಗಬೇಕು.

### ಸಾಂಸ್ಕೃತಿಕ ಸಾಮರಸ್ಯ

ನೋಟು ಕರಾರು, ಕಾಗದಪತ್ರ, ಕೋರ್ಟುಫೀ ಸ್ಟಾಂ
ವ್ಯಾಜ್ಯ ವ್ಯವಹಾರಗಳಿಂದ ನಮ್ಮ ಭಾರತೀಯ ಸಂಸ್ಕೃತಿ
ಲ್ಲಾದ ಪರಸ್ಪರ ವಿಶ್ವಾಸ, ವಚನತತ್ಪರತೆ ಇಂದು ಶಿಥಿಲವಾಗಿ
ಹಿಂದುವಿರಲಿ, ಮುಸಲ್ಮಾನನಿರಲಿ, ವ್ಯಕ್ತಿಗಳ ನಡುವಣ

ಜಿಕ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ಬ್ರಿಟಿಶರ ಆಡಳಿತ ತಲೆ ಹಾಕುವ ವರೆಗೆ ವಚನನಿಷ್ಠೆ ಮತ್ತು ದೈವಶ್ರದ್ಧೆಗಳು ಮುಖ್ಯ ಪಾತ್ರ ವಹಿಸಿ ನಿತ್ಯ ಜೀವನವನ್ನು ಸರಳವಾಗಿ ಸಾಗಿಸಲು ನೆರವಾಗಿದ್ದವು. ಇಂದು ಈ ಗುಣಗಳು ಪರಶಾಸಕರ ವಕೀಲ ಕೋರ್ಟುಗಳ, ಸಾಕ್ಷಿಪಟ್ಟಿಗಳ ನ್ಯಾಯ ದಾನ ಪದ್ಧತಿಯಿಂದ ಆಮೂಲಾಗ್ರವಾಗಿ ಅದೃಢವಾಗಿ ಹೋಗಿವೆ. ಇದನ್ನು ಪುನರುದ್ಧಾರ ಮಾಡಲು ಪುಣೆಯ ಹತ್ತಿರದ ಔಂಧ ಸಂಸ್ಥಾನ ದಲ್ಲಿಯ ಪಂಚಾಯತನ್ಯಾಯದಾನ ಪದ್ಧತಿಯನ್ನು ಅಭ್ಯಸಿಸಿ ನಮ್ಮಲ್ಲಿ ಜಾರಿಗೆ ತರಬೇಕು. ಈ ಪರಸ್ಪರವಾದ ವೈಯಕ್ತಿಕ ಚಾರಿತ್ರ ಶುದ್ಧಿಗೆ ಕಾರಣವಾದ ಗುಣ ನಮಲ್ಲಿ ಬೆಳೆದು ಬಂದ ಹೊರತು ನಮ್ಮ ಒಕ್ಕಟ್ಟು ದೃಢವಾಗದು. ಸಹಕಾರ, ಘಟನಾಕಾರ್ಯ ಸುಸೂತ್ರ ಸಾಗದು. ಸಾಮೂಹಿಕ ಪ್ರಗತಿ ಸಾಧಿಸದು, ಸೌಹಾರ್ದ ಬೆಳೆಯದು, ಸುಖಲಭಿ ಸದು. ನಂಬಿಕೆಗೆ ದ್ರೋಹವನ್ನುಂಟು ಮಾಡುವುದು ಬ್ರಹ್ಮಹತ್ಯಾದಿ ಘೋರಪಾತಕಗಳಿಗೆ ಸಮಾನವೆಂಬ ತಿಳಿವಳಿಕೆ ನಾಡಿನಲ್ಲಿ ಹರಡುವಂತೆ ವಿದ್ಯಾದಿ ಸಾಂಸ್ಕೃತಿಕ ಸಾಧನದಿಂದ ಧರ್ಮ, ನೀತಿ, ನ್ಯಾಯ ಪ್ರಕರಣ ದಿಂದ ಪ್ರಯತ್ನಿಸುವುದು ಆದ್ಯಕರ್ತವ್ಯ. ನಂಬಿಕೆಯಿಲ್ಲದೆ ಸ್ನೇಹ ಬೆಳೆ ಯದು; ಸ್ನೇಹ ಬೆಳೆಯದೆ ಐಕ್ಯ ಸಂಘಟಿಸದು. ಜಾತೀಯತೆ ಅಳಿಯದು ಸಹಕೃತ ವ್ಯವಹಾರ ಸಾಗದು. ಸಂಘಶಕ್ತಿ ವೃದ್ಧಿಯಾಗದು. ಸ್ನೇಹವು ವ್ಯಕ್ತಿಗಳ ಪಾರಸ್ಪರಿಕ ವೈಯಕ್ತಿಕತೆ ಮತ್ತು ಸ್ವಾರ್ಥಸಾಧಕತೆಯನ್ನು ನಿಗ್ರಹಿಸುತ್ತದೆ; ಅಹಂಕಾರವನ್ನಳಿಸಿ 'ವಯಂಕಾರ'ವನ್ನು ಪ್ರಸ್ಥಾಪಿಸು ತ್ತದೆ. ಕೂಡಿ ನಡೆವುದು ಅಲ್ಲಿಂದ ಪ್ರಾರಂಭವಾಗುತ್ತದೆ; ಸಹಭಾವ, ಸಹಯೋಗ, ಸಹಕಾರ, ಸಹಿಷ್ಣುತೆಗಳು ನಾಡಿಗರಲ್ಲಿ ಆಗ ಉದಯಿಸಿ ಅವರನ್ನು ಪ್ರಗತಿಪಥದಲ್ಲಿ ಮುನ್ನಡೆಸುತ್ತವೆ.

ಸಂಸ್ಕೃತಿ ವರ್ಧನದ ಪ್ರಥಮ ಮತ್ತು ಪ್ರಧಾನ ಸಾಧನವೇ ಶಿಕ್ಷಣ. ನಮ್ಮ ಕನ್ನಡಿಗರ ಶಿಕ್ಷಣಕ್ಕೆ ಇಂದು ವಿಶ್ವಾಮಿತ್ರರು ಬೇಕು; ದ್ರೋಣರು ಬೇಕು. ರವೀಂದ್ರನಾಥ ಠಾಕೂರರು ಬೇಕು, ಜಗದೀಶ ಚಂದ್ರಬೋಸ ಹಾಗೂ ಸರ್. ಸಿ. ವಿ. ರಾಮನ್ನರಂಥವರು ಬೇಕು; ಸರ್.ಎಂ. ವಿಶ್ವೇಶ್ವರಯ್ಯ, ಸರ್.ಎಸ್. ರಾಧಾಕೃಷ್ಣರಂತಹ ಗುರುಗಳು

ನಮ್ಮ ಮಹಾವಿದ್ಯಾಲಯಗಳ ಅಧ್ಯಾಪಕ ಪೀಠವನ್ನಲಂ
ಇಂತಹ ಪ್ರಜೆಗಳನ್ನು ತಯಾರಿಸಬೇಕೆಂಬ ದಿವ್ಯಾದರ್ಶ
ತಾಯ್ತಂದೆಯರ ಚಿತ್ತದಲ್ಲಿ ಚಿತ್ರಿತವಾಗಿರಬೇಕು.
ಯೋಗವೆಂದು ತಿಳಿದು ಅಭ್ಯಸಿಸುವ ಉಪಾಸಕ ವೃತ್ತಿ ನ
ರ್ಥಿಗಳಲ್ಲಿ ಬೆಳೆದು ಬರಬೇಕು. ಮಾತುಗಳು ಬಹುದೊಡ್ಡವ
ಆದರೆ ಇಂತಹ ಸನ್ನಿವೇಶವುಂಟಾದ ಹೊರತು ಉದಾ
ದೇಶದ ಸಾಂಸ್ಕೃತಿಕ ಅಧಃಪಾತವಾಗುತ್ತಿರುವದನ್ನು ಭಾರ
ಗಳಲ್ಲೂ ಕಾಣುತ್ತಿದ್ದೇವೆ. ಹಿಂದೀಯ ವಾತಾವರಣಕ್ಕೆ
ನವಪದ್ಧತಿಯ ವಿದ್ಯಾಭ್ಯಾಸಕ್ರಮವನ್ನು ಆಚರಣೆಗೆ ತರು
ಬಹಳ ಉತ್ಸಾಹದ ಮಾತುಗಳನ್ನು ವಿದ್ಯಾಶಾಸ್ತ್ರಜ್ಞರು
ದ್ದಾರೆ. ಆದರೆ ಎಲ್ಲಕ್ಕಿಂತ ಮೊದಲು ನಮ್ಮ ಸರಕಾರಗಳು
ಆಳುತ್ತವೆ; ಉಳ್ಳವರಿಂದ ತೆಗೆದು ಕೊಳ್ಳಲು ಅಂಜುತ್ತವೆ.
ಅಲ್ಲಿಯ ಮುಂಗಡ ಪತ್ರಿಕೆಯ ಮೇಲೆ ಕಡಿತಾಯ ಹಾಕಿದ
ಕೃತಿಯೇ ಎರಡನೆಯ ಮಾತಿಗೆ ನಿದರ್ಶನ; ಸಾರ್ಜಂಟಯೋ
ಜಾರಿಗೆ ತರಲಾರದುದು ಮೊದಲನೆಯದಕ್ಕೆ ದೃಷ್ಟಾಂತ.
ಯೊಂದು ಕಾರ್ಯಕ್ಷೇತ್ರದಲ್ಲೂ ಧೈರ್ಯಗ
ತಲೆದೋರಿದ್ದಕ್ಕೆ ದೇಶದ ನಾನಾಭಾಗದ ಗಲಭೆಗಳನ್ನು
ರದಾದ ಪೋಲೀಸು ಹಾಗೂ ಸೈನ್ಯದ ಅಧಿಕಾರಿಗಳ
ತೆಯ ಲಕ್ಷಣವು ಉದಾಹರಣೆಯಾಗಿದೆ! ಹಿಂದುಗಳ ಹು
ಮಾತ್ರ ಅಬಲೆಯರಾಗಿ ಅನ್ಯರಿಂದ ಅಪಹರಿಸಲ್ಪಡು
ಮತ್ತೊಂದು ನಿದರ್ಶನ!

ನಮ್ಮ ಪ್ರಾಚೀನ ಆರ್ಯರಲ್ಲಿದ್ದ ಓಜಸ್ಸು ತೇಜಸ್ಸು
ಮಾಯವಾಗಿ ಹಿಂದುಗಳೆಂದರೆ ಹಿಂದುಳಿದವರನ್ನಿಸಿದ್ದಾರೆ ಎ
ವಂತಹ ಸಂಗತಿಗಳು ಇಂದಿನ ನಮ್ಮ ರಾಜಕೀಯ ಜೀವ
ನಡೆದು ಹೋಗಿವೆ, ನಡೆಯುತ್ತಿವೆ. ಫ್ರೆಂಚರನ್ನು ಹಿಟ್ಲರ
ಅಲ್ಲಿಯ ಮುಖ್ಯ ಮಂತ್ರಿ "No men, No mon
machinery ಜನರಿಲ್ಲ, ಧನವಿಲ್ಲ; ಯಂತ್ರೋಪಕರಣಗಳ

ತಮ್ಮ ಸೋಲಿಗೆ ಕಾರಣ ಹೇಳಿದ. ಹೀಗೆ ನಮ್ಮ ನಾಡಿಂದು "ನಿರ್ವೀರಮುರ್ವೀತಲಂ" ಎನಿಸಿದುದು ಸರ್ವತ್ರ ಕಂಡುಬರುವ ಹಿನ್ನಡೆಗೆ ಮೂಲಭೂತ ಕಾರಣವಾಗಿದೆ. 'Nothing venture, nothing have' ಯಾವುದಕ್ಕೂ ಕೈಯಿಕ್ಕದಿದ್ದರೆ ಏನೂ ಸಿಗುವುದಿಲ್ಲ' ಎಂಬ ಗಾದೆ ನಮ್ಮಲ್ಲಿ ಪರಿಪೂರ್ಣತೆ ಪಡೆದಂತಿದೆ. ಆದರಿಂದಲೆ ಹೊರಗಿನ ನಿಷ್ಠುರ ಸತ್ಯವಾದಿಗಳು ಭಾರತೀಯರನ್ನು Stay at home people ಕುಳಿತು ಕಾಲ ಕಳೆವ ಜನರೆಂದೂ ನಮ್ಮಲ್ಲಿರುವುದು Do nothing spirit ಏನೂ ಮಾಡದೆ ಕೈಕಟ್ಟಿ ಕುಳಿತುಕೊಳ್ಳುವ ವಿಚಿತ್ರ ಅನಾಸಕ್ತಿಯೆಂದೂ ಹೇಳಿದ್ದಾರೆ. ಹಿಂದುಸ್ಥಾನ ವಿಭಕ್ತವಾದುದು ನಮ್ಮ ನಿರ್ವೀರ್ಯತೆಯ ನಿಶಾನೆಯಾದರೂ ಸೋಲುಗೆಲುವಿನ ಮೆಟ್ಟಲೆಂಬಂತೆ ಅದು ನಮ್ಮನ್ನು ಎಚ್ಚರಿಸಿ ಕಲಿತನವನ್ನು ಕೆರಳಿಸುವ ದುಂದುಭಿಧ್ವಾನವೆಂದೇ ಹೇಳಬೇಕು. ನಾಗರಿಕಮನ್ಯರಾಗಿ ನಾಗರಿಕರು ತಮ್ಮ ನಾಗರಿಕತೆಗೆ ಸಹಜವಾದ ಧೀರೋದಾರ ಪ್ರವೃತ್ತಿಯನ್ನು ಕಳೆದುಕೊಂಡುದಕ್ಕೆ ಆಗಬೇಕಾದ ಪ್ರಾಯಶ್ಚಿತ್ತ ಆಗಿಹೋಯಿತು. ತತ್ವಾಭ್ಯಾಸವಿಲ್ಲದಿದ್ದರೂ ನಮ್ಮ ಪೂರ್ವಜರ ತತ್ವಾಭ್ಯಾಸದಿಂದ ಹುಟ್ಟಿದ ಜಡತೆ ಮಾತ್ರ ಇಂದು ನಮ್ಮಲ್ಲಿ ಕಾಣುತ್ತಿದ್ದು ಐಹಿಕ ಆಮುಷ್ಮಿಕಗಳೆರಡಕ್ಕೂ ನಾವು ಎರವಾಗಿದ್ದೇವೆ. ಈ ತ್ರಿಶಂಕು ಸ್ವರ್ಗದಿಂದ ಮುಕ್ತರಾಗಬೇಕಾದರೆ ಮೊದಲು ಅಥರ್ವವೇದ, ಧನುರ್ವೇದಗಳನ್ನು ನಮ್ಮ ಜನ ಅಭ್ಯಸಿಸಿ ವಾಣಿಜ್ಯ ಮತ್ತು ಕ್ಷಾತ್ರ ತೇಜಸ್ಸುಗಳನ್ನು ಬೆಳೆಸಿಕೊಂಡು ವೈಜ್ಞಾನಿಕ ಮಾರ್ಗದಿಂದ ಹೊರನಾಡಿಗರ ಭುಜಕ್ಕೆ ಭುಜ ತಾಗಿಸಿ ನಡೆವ ಬಲ ಪಡೆಯಬೇಕು. ಇಲ್ಲದಿದ್ದರೆ ಇಂದಿನ ತ್ವರಿತಗತಿಯಿಂದ ಸಾಗುವ ಜಗತ್ತಿನ ಓಟದ ಸ್ಪರ್ಧೆಯಲ್ಲಿ ಭಾರತೀಯರು, ಕನ್ನಡಿಗರು ಬಹಳ ಹಿಂದೆ ಉಳಿದು 'ಕಿಂದರಿ ಜೋಗಿ'ಯಲ್ಲಿಯ ಕುಂಟ ಹುಡುಗನಂತೆ ನಿರ್ವಿಣ್ಣರಾಗಿ ಪುನಃ ದಾಸ್ಯಪಂಕದಲ್ಲುರುಳಿ ನರಳಬೇಕಾಗಿ ಬರಬಹುದು. ಇಂತಹ ದುರ್ದಶೆ ಬಾರದಂತೆ ಮುನ್ನೆಚ್ಚರಿಕೆ ತೆಗೆದುಕೊಂಡು ಸಾಂಸ್ಕೃತಿಕ ಸಾಮರಸ್ಯದತ್ತ ಗಮನಕೊಡಬೇಕಾಗಿದೆ.

ಭಾರತೀಯ ಸಂಸ್ಕೃತಿಯ ಸಮ್ಮಿಲನ: ಸಾಮರಸ್ಯ ಉಂಟಾಗಬೇ

ಕೆಂಬುದಕ್ಕಿಂತ ಮೊದಲು ನಮ್ಮ ಪ್ರಾಂತ್ಯದ ಐಕ್ಯಭಾವವನ್ನು
ಸುವ ಸಾಂಸ್ಕೃತಿಕ ಏಕೀಕರಣವಾಗುವಂತೆ ಯತ್ನಿಸಬೇಕಾದುದ
ವಾರ್ಯ. ಕೂಲಿಕಾರ ಬಂಡವಾಲಿಗರಲ್ಲಿ ವರ್ಗ ಭೇದವಳಿಯಬೆ
ಆ ಎರಡು ವರ್ಗಗಳ ನಡುವೆ ಮದುವೆ ನೆಂಟಸ್ತಿಕೆ ನಡೆಯಬೆ
ಗಾಂಧಿಜಿಯೆಂದಂತೆ ಕರ್ನಾಟಕ ಸಂಸ್ಕೃತಿ ಸಾಮರಸ್ಯಕ್ಕೆ ಮಂಗ
ಮೈಸೂರು, ಧಾರವಾಡ, ಕಾರವಾರಾದಿ ವಿವಿಧ ಪ್ರದೇಶಗಳ
ಕೊಡುತರು ನಡೆಯಬೇಕು. ಈ ಸಾಮಾಜಿಕ ಸೂತ್ರದ ಪ್ರಾ
ಅಷ್ಟಿಷ್ಟಲ್ಲ. ಜಾತೀಯ ಒಗ್ಗಟ್ಟಿಗಾಗಿ ಒದ್ದಾಡುವವರು ವೆ
ತಮ್ಮಲ್ಲಿಯ ವರ್ಗೀಯ ಒಕ್ಕಟ್ಟನ್ನು ಗಟ್ಟಿಮಾಡಿಕೊಳ್ಳ
ಸಿರಿವಂತ ಬಡವ, ವೈಷ್ಣವ ಸ್ಮಾರ್ತ, ನೌಕರ ಸ್ವತಂತ್ರೋಪ
ಕನ್ನಡ ಮಾತಿನವ, ಬೇರೆ ಮನೆಮಾತಿನವ ಈ ವರ್ಗಗಳು ಪ
ಕೊಡುಕೊಳ್ಳುಗಳಿಂದ ಬಾಂಧವ್ಯ ಬೆಳೆಸಿಕೊಂಡು ಕನ್ನಡತನ
ಅಳವಡಿಸಿಕೊಳ್ಳಲು ಪ್ರಯತ್ನಿಸುವುದು ಮೊದಲ ಕರ್ತವ್ಯ. ಅ
ಶೈಕ್ಷಣಿಕ ಏಕೀಕರಣಕ್ಕೆ ಕೈಹಾಕಬೇಕು.

ಶೈಕ್ಷಣಿಕ ಕ್ಷೇತ್ರದಲ್ಲಿ ಇಂದು ಕಂಡುಬರುವ ಪ್ರಾದೇ
ಯನ್ನು ಹೀಗೆ ಬೆಳೆಯಗೊಟ್ಟರೆ ಕರ್ನಾಟಕದಲ್ಲಿ ನಾಲ್ಕಾರು ಪಾಕಿ
ಗಳು ಸಾಂಸ್ಕೃತಿಕವಾಗಿ ಕಡೆತನಕ ಉಳಿಯಬಹುದು. ವಿದ್ಯಾ ಸಂ
ಏಕಸೂತ್ರತೆ, ಪಠ್ಯಪುಸ್ತಕಾದಿಗಳ ಐಕ್ಯ, ಭಾಷಾ ಮಯಾ
ಒಮ್ಮತ ಇತ್ಯಾದಿ ಸಾಮ್ಯಗಳನ್ನು ಸಾಧಿಸಿಕೊಳ್ಳದೆ ಕನ್ನಡ ಸಂಸ್ಕ
ಪುನರುಜ್ಜೀವನದ ಬಗ್ಗೆ ಮಾತನಾಡುವುದು ನಿಷ್ಫಲವೇ ಸರಿ.
ವಸ್ತ್ರಧಾರಿಗಳಾದ ಒಂದು ರಾಜ್ಯದ ಸೈನಿಕರ ಪಂಕ್ತಿಯಂತೆ ಕನ್ನ
ಜೀವನದ ನಾನಾ ಕಾರ್ಯಕ್ಷೇತ್ರಗಳಲ್ಲಿ ಒಮ್ಮತದ ನಡೆಯು
ಹೊರತು ಸಾಂಸ್ಕೃತಿಕ ಸಾಮರಸ್ಯವುಂಟಾಗದು; ಪರಸ್ಪರ ಸೌ
ವೃದ್ಧಿಹೊಂದದು, ಐಕ್ಯಉಂಟಾಗದು, ಏಳಿಗೆ ನೆನಸಾಗದು.

ಅನುಕರಣಬುದ್ಧಿಯು ಸಂಸ್ಕೃತಿ ಸಂವರ್ಧನದ ಮೊದಲ
ನೆರೆಹೊರೆಯ ಪ್ರಾಂತಗಳವರ ಉತ್ತಮ ಗುಣಗಳನ್ನು ಅನುಸರಿಸ
ಅಭಿಮಾನಕ್ಕೆ ಕುಂದಲ್ಲ. ಮರಾಠರ ಒಕ್ಕಟ್ಟು ಮತ್ತು ಸಂ

ರ್ಾಣ ಕೌಶಲ, ತಮಿಳರ ಕಾರ್ಯಸಾಧಕತೆ ಮತ್ತು ಪರಿಸ್ಥಿತಿಗೆ ಅನು
ಣವಾಗಿ ನಡೆದುಕೊಳ್ಳುವ ಜಾಣ್ಮೆ, ತೆಲುಗರ ಗಂಡುತನ ಮತ್ತು
ತ್ಮಗೌರವ—ಇವುಗಳನ್ನು ನಾವು ಕಲಿಯಬೇಕು. ಬನಿಯಾ ಜನರ
ತ್ಯಪಾರ ಕೌಶಲ ಯಾವ ಕೆಲಸವನ್ನೂ ಮಾಡುವೆವೆಂಬ ಮುಸಲ್ಮಾನರ
ತ್ತಿ ಗೌರವ, ಭಿಕ್ಷಾಧಿಕಾರಿಯಾಗಿದ್ದರೂ ಆತ್ಮ ರಕ್ಷಣೆಗೆ ಸದಾ
ದ್ಧನಾಗಿರುವ ಶೀಖನ ಶೌರ್ಯ - ಇವುಗಳು ಅನುಕರಣೀಯವಿವೆ.

ಹಿಂದಿನ ಕಾಲದ ತತ್ವಗಳನ್ನು, ಧರ್ಮವನ್ನು, ಮಹಾತ್ಮರನ್ನು
ೂಜಿಸುವ ದೌರ್ಬಲ್ಯವುಳ್ಳವರು ಇದ್ದವರೊಳಗೆ ಹೆಚ್ಚು ಆಧುನಿಕತೆ
ಯುಳ್ಳ ಬುದ್ಧನನ್ನು ಆರಾಧಿಸಲು ತೊಡಗಬೇಕು. ಅವನ ವೈಜ್ಞಾನಿಕ
ಾಗೂ ಧಿರೋದಾರ ದೃಢಭಾವಗಳನ್ನು ಆದರ್ಶವಾಗಿಟ್ಟುಕೊಳ್ಳಬೇಕು.
ುತ್ತು ಗ್ರಂಥಗಳ ಅಥವಾ ಪ್ರವಾದಿಗಳ ಹಾಗೂ ಮತಾಚಾರ್ಯರ
ಸರಿನ ಮೇಲೆ ಆಣೆಯಿಟ್ಟು ವಾದಿಸುವ ಅಂಧಮಾರ್ಗವನ್ನು ತ್ಯಜಿಸಿ
ತಃ ತನ್ನ ಅನುಭವದ ಮೇಲೆ ನಿಂತು ವಾದಿಸುವ ವಿಚಾರ ಸಾಮರ್ಥ
ನ್ನು ಕೈಗೂಡಿಸಿಕೊಳ್ಳಬೇಕು. ಇಷ್ಟಾದ ಹೊರತು ನಮ್ಮಲ್ಲಿ ಹೆಸ
ಾಂತ ವಿಜ್ಞಾನಿಗಳಾಗಲಿ, ಕಲೆಗಾರರಾಗಲೀ, ತತ್ವಜ್ಞರಾಗಲೀ, ಸಾಹಿತಿ
ಳಾಗಲಿ ಉದಯಿಸರು; ರಾಷ್ಟ್ರಮಾನ್ಯ ಇಲ್ಲವೆ ಲೋಕಮಾನ್ಯ ಪುರು
ರು ಅವತರಿಸರು; ನಮ್ಮ ಪುನರುತ್ಥಾನವಾಗದು. ಪುಲಿಕೇಶಿ,
ಯೂರ ವರ್ಮ, ಜಕ್ಕಣ, ಶೇಷಣ್ಣಾ, ಪಂಪ, ಮಾಧವಚಾರ್ಯರು
ುನಃ ಅವತರಿಸಬೇಕಾದರೆ, ಅಂಥವರು ನಾಡಿನಲ್ಲಿ ಹುಟ್ಟಬೇಕಾದರೆ
ುತ್ತು ರೂಪುಗೊಳ್ಳಬೇಕಾದರೆ ಅಂತಹ ವಾತಾವರಣಗಳು ನಿರ್ಮಿತವಾ
ುವದಗತ್ಯ. ಈ ಕನಸುಗಳು ಕನ್ನಡಿಗರಲ್ಲಿ ಖಚಿತವಾಗಿ ಮೂಡಿ ನೆಲೆ
ಂತರೆ, ಅವುಗಳ ಬಗೆ ಉತ್ಕಂಠಯುಂಟಾದರೆ, ಉತ್ಸಾಹವೆದ್ದರೆ ಕನ್ನ
ಿಗರು ಕಾರ್ಯಸಾಧನೆಯಲ್ಲಿ ಯಾವ ಪ್ರಾಂತದವರಿಗೂ ಹಿಂದುಳಿಯರು.

## ೨ ಸಾಹಿತ್ಯದ ಸಿದ್ಧಿ

ಸಾಹಿತ್ಯದಲ್ಲಿ ಒಂದು ಸಿದ್ಧಿಯಿದೆ. ಅದರ ಬಗ್ಗೆ
ಅನೇಕ ವಿಧವಾಗಿ ಹೇಳಿದ್ದಾರೆ. ಕಾಂತಾ ಸಮ್ಮಿತಿಯಿಂದ
ಲಭಿಸುವುದು ಎಂಬುದು ಹಳೆಯ ಮಾತು. ಬ್ರಹ್ಮಾಸ್ವಾದ
ವಾದ ರಸಾಸ್ವಾದ ಸಿಗುವುದೆಂಬುದೂ ಹಾಗೇ.

ರಸಾಸ್ವಾದವೆಂದರೆ ತಲ್ಲೀನತೆ, ರಸಮಯತೆ, ವರ್ಣಿ
ದೊಡನೆ ಸಾಮರಸ್ಯ ಹೊಂದುವುದು, ವರ್ಣಿತಭಾವದೊಡನೆ
ವಾದ ನಮ್ಮ ಭಾವ ಏಕೀಕೃತವಾಗುವುದು. ಮನುಷ್ಯನ
ಗುಣವಾದ ಸಹಾನುಭೂತಿಯೇ ಇದರ ತಳಹದಿ. ಸಹಾನು
ಸಹಭಾವ ಜನ್ಯ, ಏಕಜೀವ ದೇಹದ್ವಯ ನ್ಯಾಯಜನ್ಯ,
ಹೇಳಿದ ಮೊದಲ ಗುಣವಾದ ಮೈತ್ರೀಭಾವ ಜನ್ಯ.

ಮಿತ್ರತ್ವಕ್ಕಿಂತ ಪವಿತ್ರತರವಾದ ಮಾನವ್ಯ ಸಂಬಂಧವಿ
ರಷ್ಟು ಮಧುರವಾದ ಅನುಭವವು ಮತ್ತೊಂದಿಲ್ಲ ಎಂಬು
ಜನರ ಅನುಭವಕ್ಕೆ ಬಂದ ವಿಷಯ. ಜೀವನದಲ್ಲಿ ಅನೇಕರಿ
ಕಾರಣಗಳಿಂದ ನಿಜ ಮೈತ್ರಿಯ ಅನುಭವವು ಬಹಳ ಕಾಲ
ಬಹುದು. ರಾಜದ್ವಾರದಲ್ಲೂ ಸ್ಮಶಾನದಲ್ಲೂ ನೆರವಾಗುವ
ದೊರೆತಿರಲಿಕ್ಕಿಲ್ಲ; ಸುಖ ದುಃಖಗಳಲ್ಲಿ ಸಮಭಾಗಿಯಾಗಿ
ಮತ್ತೊಂದು ಜೀವ ನಚ್ಚಿನದಾಗಿ ಕಡೆ ತನಕ ಉಳಿದಿ
ಬಾಳೊಂದು ಸುಖದುಃಖ ಸಂಗಮ, ಗುಣದೋಷಗಳ ಮಿಶ್ರಣ,
ಸ್ಥಿತಿ ಅನುಪಸ್ಥಿತಿಗಳ ಕೂಡಿಕೆ. ಆದುದರಿಂದ ಅನೇಕರಿಗೆ ಅವ
ಗಿಂತ ವಿಷಗಳಿಗೆಗಳೇ ಹೆಚ್ಚಾಗಿರಬಹುದು. ಇನ್ನಿತರರಿಗೆ ಸು
ಗಳು ಹೆಚ್ಚಿದರೂ ಅವು ಬೇಗನೆ ಕಳೆದು ಹೋದಂತೆನಿಸು
ದುಃಖದ ದಿನಗಳು ಬಹಳ ಉದ್ದುದ್ದವಾಗಿ ತೋರುವುವು. ಈ
ಕಾರಣಗಳಿಂದ ಜೀವನದಲ್ಲಿ ಎಷ್ಟೋ ಕಾಲಗಳಲ್ಲಿ ಅತೃಪ್ತಿ ಒಡ
ಬಹುದು. ಆಗ ಸಾಹಿತ್ಯಾದಿ ಕಲಾಸ್ವಾದದಿಂದ ಅಂಥ ಅಸ

ಕರ ಸ್ಥಿತಿಯನ್ನು ಮರೆತು ಮನಸ್ಸನ್ನು ಉಲ್ಲಾಸಗೆಡದಂತೆ ಇಟ್ಟುಕೊಳ್ಳ
ಬಹುದು. ರಸಾಸ್ವಾದವು ಸದಾ ಆನಂದಕರವಾದ ಅನುಭವ. ಕರುಣ
ರಸದ ಆಸ್ವಾದನದಲ್ಲಿ ಕೂಡ ಆನಂದವಿದೆಯೆಂಬುದು ಸೂಕ್ಷ್ಮವಾಗಿ
ವಿಚಾರಿಸಿದರೆ ತಿಳಿಯದಿರದು. ಅದು "ದುಃಖ ಹೆತ್ತ ಸುಖ". ಪರ
ದುಃಖ ಸಹಾನುಭೂತಿಯಲ್ಲಿ ಸಾತ್ವಿಕವಾದ ಒಂದು ಆನಂದವಿದೆ. ಆ
ಅನುಭವದಲ್ಲಿ ಅದು ಅನ್ಯರದೆಂಬ ಜ್ಞಾನವಿದೆ, ಅನ್ಯರದಾದರೂ ತನ್ನದೇ
ಎಂಬ ಭಾವನೆಯಿದೆ. ಇದರಿಂದ ತನ್ನದೇ ಆಗಿದ್ದರೆ ಉಂಟಾಗುತ್ತಿದ್ದ
ವಾಸ್ತವಿಕ ನಷ್ಟದ ಅನುಭವವಿಲ್ಲ, ಅನ್ಯರದೆಂಬ ಉಪೇಕ್ಷಭಾವವಿಲ್ಲ.
ಅವಾಸ್ತವಿಕವೆಂಬ ಜ್ಞಾನದ ಬಗ್ಗೆ ಲಕ್ಷ್ಯವಿಲ್ಲ. ಹೀಗೆ ರಸವೆಂಬು
ದೊಂದು ಆತ್ಮಾನಂದ. ಇಂಥ ವಿಲಕ್ಷಣದ್ದಿರುವುದರಿಂದಲೇ ಇದನ್ನು
ಬ್ರಹ್ಮಾಸ್ವಾದ ಸಹೋದರ ಎನ್ನುವುದು.

ಇದರ ಮೇಲೆ ವಾಸ್ತವಿಕ ಪ್ರತ್ಯಕ್ಷಕ್ಕಿಂತ ಮಾನಸಿಕ ಪ್ರತ್ಯಕ್ಷವೇ
ನಮಗೆ ಹೆಚ್ಚು ಹತ್ತಿರದ್ದೆಂಬುದು ಸರ್ವವಿದಿತವಾದುದು. ಈ
ಮಾನಸಿಕ ಪ್ರತ್ಯಕ್ಷವು ಕಾವ್ಯಾದಿಕಲೆಗಳಲ್ಲಿ ಕೇವಲ ಆನಂದ ರೂಪದ್ದೇ
ಇರುವುದರಿಂದ ಅವು ಬಹುಮಟ್ಟಿಗೆ ಆಧ್ಯಾತ್ಮಿಕ ಅಂಶಗಳಿಂದ ತುಂಬಿವೆ
ಎಂದು ಹೇಳಬೇಕಾಗುತ್ತದೆ. ಇತಹವುಗಳೆರಡರ ಅಂತ್ಯದ ಗುರಿ ಆನಂದ,
ಇದ್ದ, ಇರುತ್ತಿರುವ ಮತ್ತು ಇರುವ ಅನುಭವಗಳೆಲ್ಲ ಆನಂದ ಸ್ವರೂಪದ
ವೆಂಬ ಔಪನಿಷದಿಕ ಸತ್ಯಕ್ಕೆ ರಸವು ಆಧಾರಭೂತವಾಗಿದೆ. ಇದರಿಂದ
ಕಲಾರಾಧನೆಯು ಸದಾನಂದ ಸ್ಥಿತಿಗೊಯ್ಯುವ ಒಂದು ಶಿಕ್ಷಣ ತರ
ಬೇತು ಎಂದರೂ ಎನ್ನಬಹುದು. ಯೋಗ ಶಾಸ್ತ್ರಾದಿ ಕಠಿನ ಮಾರ್ಗ
ಗಳಿಂದ ಶೀಘ್ರವಾಗಿ ಮುಕ್ತಿಯನ್ನು, ಆತ್ಮದ ಮೂಲಸ್ಥಿತಿಯನ್ನು,
ಕೈವಲ್ಯತ್ವವನ್ನು ಪಡೆಯಲಾದರೆ ಕಲೋಪಾಸನದಿಂದ ಸುಲಭವಾಗಿ
ಕ್ರಮೇಣ ಅದೇ ಗುರಿಯನ್ನು ಸಾಧಿಸಬಹುದೆಂಬುದೇ ರಸಿಕರ ಸಿದ್ಧಾಂತ
ಅಸಂಸ್ಕೃತ ಜಗತ್ತಿನಿಂದ ಕಲಾ ಸಂಸ್ಕಾರ ನಮ್ಮನ್ನು ಕಾಂತಾ ಸಮ್ಮಿತಿಯ
ಉಪದೇಶ ರೂಪದ ರಸಾನುಭವದಿಂದ ಉದಾತ್ತತೆಗೊಯ್ಯುವುದು.
ಉದಾತ್ತತೆಯ ಚರಮ ಸೀಮೆಯಲ್ಲೇ ಕೈವಲ್ಯವಿರುವುದು.
ವಿಶ್ವ ಪ್ರೀತಿಯಿರುವುದು, ವಿಶ್ವವೃತ್ತಿತ್ವವಿರುವುದು, ಅಣುವಿಗೆ

ಮಹದ್ಭಾವ ಬರುವುದು. ಆತ್ಮವಿಕಾಸವಾಗಿ
ವಾಗುವುದು. ವಿಶ್ವದಲ್ಲಿ ಒಂದೆಡೆಯಿರುವ ಭಾವ ಹೋಗಿ
ವ್ಯಾಪ್ತಿ ಬಂದು ಅನಾಸಕ್ತಿಯೋಗದಿಂದ ಯೋಗದಲ್ಲಿದ್ದು
ತ್ತಿರುವ ಅಪೂರ್ವ ವ್ಯಾಹತಸ್ಥಿತಿ ಪ್ರಾಪ್ತವಾಗುವುದು. ಇ
ಸತ್ಯ. ಸೃಷ್ಟಿ, ಸ್ಥಿತಿ, ಲಯಗಳ ಒಳಗುಟ್ಟು. ಎಲ್ಲವೂ
ಮಾತಿಗೆ ವಸ್ತುಗಳ ತಾತ್ಕಾಲಿಕತೆಯು ಮೂಲಕ ಅವುಗಳ
ನಿರ್ಣಯಿಸುವ ಅನುಭವಕ್ಕೆ ನಾಶವೆಂದು ತಿಳಿಯಬೇಕು
ಆತ್ಮ, ಅದು ಏಕಮೇವಾದ್ವಿತೀಯ ಶಾಶ್ವತ ಎಂಬ ಮಾತಿಗೆ
ಜೀವನಸೂತ್ರದ, ಭಾವತರಂಗಿಣಿಯ ನೈರಂತರ್ಯದ ಆಧಾ
ಅವುಗಳ ಬೆಲೆಯನ್ನು ನಿರ್ಣಯಿಸುವ ಅನುಭವಕ್ಕೆ ನಿತ್ಯ
ತಿಳಿಯಬೇಕು.

ಕಲಾ ಸಾಧನದಿಂದ, ಸಾಹಿತ್ಯಾನುಶೀಲನದಿಂದ ಕ
ಬುದ್ಧಿಭಾವನೆಗಳ ಸಂಸ್ಕಾರ ಉದಾತ್ತತವಾಗುತ್ತ ಹೋಗುವು
ತ್ಯಾದಿ ಕಲೆಗಳ ನಿಕಷ, ಸತ್ವನಿರ್ಣಾಯಕ ಫಲಿತಾಂಶ.
ಮತ್ತು ರಸಗ್ರಾಹಕ ಹೃದಯ ಇವುಗಳ ಪರಸ್ಪರ ಮೂಲ್ಯಗ
ಸಿದ್ಧಿಯ ನಿಶ್ಚಿತಾನಿಶ್ಚಿತತೆಗಳು ಅವಲಂಬಿಸಿವೆ.

ಮೇಲಿನ ಅಂಶವನ್ನರಿಯದೆ ಹಲವರಿಂದು 'ನಮಗೆ ಅ
ಸಾಹಿತ್ಯಬೇಕು. ಬಟ್ಟೆಕೊಡುವ ಕಲೆಬೇಕು' ಎಂದು ಮುಂ
ಚುತ್ತಾರೆ. ಆಹಾರ ನಿದ್ರಾಭಯ ಮೈಥುನಾದಿಗಳು
ಹೇಗೋ ಹಾಗೇ ಮಾನವನಿಗೂ ಅನಿವಾರ್ಯ ಅವಶ್ಯಕತೆಗಳ
ಯಾರಿಗೂ ಅಲ್ಲಗಳೆವ ಧೈರ್ಯ ಬರಲಾರದು. ಆದರೆ ಅವುಗ
ಸುವ ಸಾಧನಗಳು ಬೇರೆ. ಅವುಗಳು ಜೀವನ ವೃಕ್ಷಕ್ಕೆ ಗ
ಹಾಗೆ; ಸಂಸ್ಕೃತಿಯು ಅಂಶವು ಸೂರ್ಯನ ಬೆಳಕಿದ್ದಹಾಗೆ.
ಸಾಧನೆ ಕಲೆ. ಸೂರ್ಯನು ಹೇಗೆ ಗೊಬ್ಬರವನ್ನು ಕೊಡ
ಹಾಗೇ ಸಾಹಿತ್ಯಾದಿ ಕಲೆಗಳೂ ನೇರವಾಗಿ ಅನ್ನವಸ್ತ್ರಗಳ
ಡೆಯೂ ದೊರಕಿಸಿಕೊಡುವುದು ಅಸಾಧ್ಯ. ಕೆಲವೆಡೆ ಮ
ದಿಂದ ದೊರಕಿಸಿಕೊಡಬಹುದು. ಸೂರ್ಯನು ಸಮುದ್ರ

ಪೃಥ್ವಿಗೆ ಒದಗಿಸಿಕೊಟ್ಟ ಹಾಗೆ. ಬೆಳಕು ಮತ್ತು ಶಾಖಗಳನ್ನು ಕೊಡುವುದು ಹೇಗೆ ಸೂರ್ಯನ ನೇರವಾದ ಕೆಲಸವೋ ಹಾಗೆ ಸಂಸ್ಕೃತಿ ಮತ್ತು ಜ್ಞಾನಗಳನ್ನು ಕೊಡುವುದು ಕಲೆಯ ಕರ್ತವ್ಯ. ನೀರೊದಗಿಸುವುದು, ಸೂರ್ಯನಿಗೆ ಗೌಣಕರ್ತವ್ಯ ಇಲ್ಲವೆ ಅವನ ನೇರವಾದ ಕರ್ತವ್ಯದ ಔಪಾಧಿಕ ಪರಿಣಾಮ. ಅದೇಪ್ರಕಾರ ಸಾಹಿತ್ಯಾದಿ ಕಲೆಗಳ ಕಾರ್ಯದಿಂದಲೂ ಕೆಲವರಿಗೆ ಹಣಸಿಗಬಹುದು, ವಸ್ತ್ರಾದಿ ಪಾರಿತೋಷಕ ಸಿಗಬಹುದು; ಆದರದು ಗೌಣ ಮತ್ತು ಔಪಾಧಿಕ. ಇನ್ನು ರಸಾನುಭೂತಿಯ ಮೂಲಕ ಜನತೆಯಲ್ಲಿ ಹೃದಯ ಪರಿವರ್ತನವನ್ನುಂಟುಮಾಡಿ ಅದರಿಂದ ಅವರು ತಮ್ಮ ಭೌತಿಕ ಏಳಿಗೆಯನ್ನು ಸಾಧಿಸಿಕೊಳ್ಳುವ ಬದ್ಧಿಯನ್ನು ತಾಳಿ ಅನ್ನವಸ್ತ್ರಗಳು ಎಲ್ಲರಿಗೂ ದೊರೆವಂತೆಸಗದರೆ ಅಂಥ ಕಲೆಗಾರ ಸುಧನ್ಯನೆಂದು ಈ ಕೆಟ್ಟಕಾಲದಲ್ಲಿ ಯಾರೂ ಹೇಳದಿರಲಾರರು. ಆದರೆ ಸಾಮಾನ್ಯರಿಂದ ಒಮ್ಮಿಂದೊಮ್ಮೆ ಕ್ರಾಂತಿಕಾರಕವೆನಿಸುವ ಕಲಾವಸ್ತುವನ್ನು ಒತ್ತಾಯಿಸಿ ತಯಾರಿಸ ಹೋದರೆ ಅರೆಗರುವಿನಂತಹ ಕೃತಿಗಳು ಪತನವಾಗಿ ಹುಟ್ಟಿಬಂದಾವು.

ಕನ್ನಡ ಸಾಹಿತ್ಯವಿಂದು ಶಾಖೋಪಶಾಖೆಗಳಿಂದ ಹಬ್ಬಿ ಬೆಳೆಯುತ್ತಿದೆ ಎಂಬುದು ನಿಜ. ಆದರೆ ಅದು ನಂದನದ ಮಂದಾರದಂತೆ ಬೆಳೆಯದೆ ರಸ್ತೆಯ ಬದಿಯ ಮುಟ್ಟಿದರೆ ಮುನಿಯಂತೆ ಹಬ್ಬಿ ಬೆಳೆಯುತ್ತಿದೆ. ಎಲ್ಲಿ ನೋಡಿದರೂ ಅಚ್ಚಾಗಿ ರಾಶಿರಾಶಿಯಾಗಿ ತೋರುವ ಬರಹಗಳಲ್ಲಿ ಪದ, ಅರ್ಥ, ವಾಕ್ಯದೋಷಗಳ ತಾಂಡವನೃತ್ಯವನ್ನಲ್ಲದೆ ಬೇರೊಂದನ್ನು ಕಾಣಲು ಶಕ್ಯವಿಲ್ಲ. ಇದರ ಜೊತೆಗೆ ಅನ್ಯಸರಸ್ವತೀ ವ್ಯಭಿಚಾರ ಕೂಡ ಪ್ಲೇಗಿನಂತೆ ಹರಡುತ್ತಿದೆ. ಪದ, ವಾಕ್ಯ, ಅರ್ಥ, ಅಭಿಪ್ರಾಯಾದಿಗಳ ಚೌರ್ಯವು ತಲೆಹಾಕಿದೆ. ಬರಹಗಾರರಲ್ಲಿ ಶಕ್ತಿ ಸಂಪಾದನೆಯಿಲ್ಲದೆ ಕೀರ್ತಿ ಸಂಪಾದನೆ ಮಾಡುವ ಹುಸಿ ಹಂಬಲು ಹೆಚ್ಚುತ್ತಿರುವುದು ವಿಷಾದಕರ. ಜಗಲಿ ಹಾರದೆ ಗಗನಕ್ಕೆ ಹಾರುವ ಪ್ರವೃತ್ತಿಯು ಕನ್ನಡ ನಾಗರಿಕತೆಗೆ ಲಾಂಛನಾಸ್ಪದವಾಗಿದೆ. ಇಂತಹ ಕೃತಕತೆಯು ಜೀವನದಲ್ಲಿ ಬೇರು ಬಿಡುತ್ತ ಹೋದರೆ ನಾವು ಅಧೋಗತಿಗಿಳಿಯುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ದೊಡ್ಡವರೆನಿಸಿಕೊಂಡವರಲ್ಲೇ

ಸಾಕಷ್ಟು ದೊಡ್ಡಸ್ತಿಕೆ ಇಲ್ಲದಕಾರಣ ಅವರಿಂದ ಚಿಕ್ಕವರು
ಮಾರ್ಗದರ್ಶನವನ್ನು ಪಡೆಯಲಾರದಾಗಿದ್ದಾರೆ. ಇದರಿಂ
ಲೋಕ ಕೂಡ ಕತ್ತಲಲ್ಲಿ ಎಡಹುತ್ತ ತಡಹುತ್ತ ಸಾಗಿ
ಸಂಸ್ಕೃತ ಅಭಿರುಚಿಯನ್ನು ಬೆಳೆಸಿಕೊಳ್ಳುವ ಪ್ರಯತ್ನದತ್ತ
ವಾಗಿದೆ. ನಿತ್ಯ ವ್ಯವಹಾರದಲ್ಲಿ ಹೇಗೋ ಹಾಗೆ ನಮ್ಮಲ್ಲಿ ಒಂ
ಬಿಡಲಾರದ ವೈಗಳ್ಳತನ ತಲೆಹಾಕಿದೆ. ಇದು ವ್ಯುತ್ಯುಸ್ವರ

ಆರ್ಥಿಕ ಪ್ರಪಂಚದಲ್ಲಿ ಸೋಶಾಲಿಜಂ–ಸಾಮ್ಯುವಾದ
ವೆನಿಸಬಹುದು. ಆದರೆ ಕಲಾಪ್ರಪಂಚದಲ್ಲಿ ಅದು ಸಾಧ್ಯವಿಲ್ಲ.
ಯಲ್ಲಿ ಒಂದು Standard ಮಟ್ಟವನ್ನು ಕಾಲಕ್ರಮೇಣ ಸ
ದೆಂಬುದು ಸಾಮಾನ್ಯವಾದ ಸಾಮೂಹಿಕ ಅಭಿಪ್ರಾಯವಲ್ಲ
ನಿಕವಲ್ಲ. ಇನ್ನು ರುಚಿಭೇದ ಇರಬಹುದಾದರೂ ಆ ಭಿನ್ನ ರು
ಮೇಲು ಮಟ್ಟದವಾಗಬೇಕೆಂಬುದು ಗುರಿ. ಆದರೆ, ವಾಸ್ತವ
ದಲ್ಲಿ ಅದೂ ಸಂದೇಹಾಸ್ಪದವಾದ ಮಾತೇ. ಆದುದರಿಂ
ಯಲ್ಲಿ— ಅದರಲ್ಲೂ ಕಲಾನಿರ್ಮಾಪಕರಲ್ಲಿ— Aristr
ಶ್ರೀಮಂತಿಕೆ ತಲೆಯೆತ್ತಿದಾಗ ಮಾತ್ರ ರಾಷ್ಟ್ರೀಯ ಕಲಾ ಸ
ವಿಶ್ವದಲ್ಲಿ ಒಂದು ಸ್ಥಾನವನ್ನು ಪಡೆಯಬಹುದು. ಹಾಗಲ್ಲದೆ
Appeal— ಪಾಮರರಂಜನೆಗೇ ಮೀಸಲಿಡುವೆವೆಂಬ ಕೃ
ಭಾವದಿಂದ ಅತಿ ಸರಳತೆಯ ಮಾರ್ಗವನ್ನು ತುಳಿಯುಹತ್ತಿ
ಜನರು ಬ್ರಾಹ್ಮಣರ ಮಟ್ಟಕ್ಕೆ ಬರುವುದರ ಬದಲು ಬ್ರಾಹ್ಮ
ಜನರ ಮಟ್ಟಕ್ಕಿಳಿದಂತಾದೀತು. ಈ ದೃಷ್ಟಿಯಿಂದ ಕನ್ನಡದ
ರೆನಿಸಿದ ಬರಹಗಾರರು ವಿಚಾರಮಾಡಿ ನಾಡಿನ ಕಲಾ ಸಂಸ್ಕ
ದುಷ್ಕಾಲದಲ್ಲಿ ದಾರಿ ತೋರಲು ಮುಂದೆ ಬರುವರೆಂದು ಆಶಿಸ

## ೪ ವಿಶ್ವಶಾಂತಿ

ಇಂದು ವಿಶ್ವಶಾಂತಿಯ ಮಾತನ್ನು ಬಹಳ ಜನರ ಬಾಯಲ್ಲಿ ಕೇಳುತ್ತೇವೆ. ಅದಕ್ಕಾಗಿ ನಾನಾ ಯೋಜನೆಗಳನ್ನು ರಚಿಸಿಕೊಟ್ಟವರೂ ಇದ್ದಾರೆ. ಜಾಗತಿಕ ಸರಕಾರ ರಚನೆ, ಅಂತರ್‍ರಾಷ್ಟ್ರೀಯ ಮಹಾ ಮಂಡಲ, ಮುಂತಾದುವನ್ನು ರಚಿಸಬೇಕೆಂದು ಎಲ್ಲರೂ ಹೇಳ ತೊಡಗಿದ್ದಾರೆ. ಆದರೆ ಜಗತ್ತಿನ ಯುದ್ಧಪ್ರಿಯ ನಾಯಕರು ಮಾತ್ರ ಮಾತಾಡದೆ ತಮ್ಮ ಕಾರಖಾನೆಗಳಲ್ಲಿ ಸಿಡಿಮದ್ದುಗಳನ್ನು ಅಹೋರಾತ್ರಿ ತಯಾರಿಸುತ್ತಲಿದ್ದಾರೆ. ಅಮೇರಿಕದ ಸಂರಕ್ಷಣಾ ಯೋಜನೆಯ ಮುನ್ನಡೆಯನ್ನು ಅವಲೋಕಿಸಿದರೆ, ಅದರ ಕಮ್ಯುನಿಸ್ಟ ದ್ವೇಷವನ್ನು ಕಂಡರೆ ಇಂದೋ ನಾಳೆಯೋ ಕಾಲು ಕೆರೆದು ರಷ್ಯವನ್ನು ಯುದ್ಧಕ್ಕೆಳೆದು ಮೂರನೆಯ ಮಹಾ ಯುದ್ಧವನ್ನಾರಂಭಿಸಿ ಬಿಡುವುದೋ ಎಂಬಂತಿದೆ. ರಷ್ಯವಾದರೂ ಇದರ ಪ್ರತಿ ಭಟನೆಗಾಗಿ ಒಂದಾದ ಮೇಲೊಂದರಂತೆ ಪಶ್ಚಿಮ ಯುರೋಪಿನ ರಾಷ್ಟ್ರಗಳಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸುತ್ತ ನಡೆದಿದೆ. ಚಿಕ್ಕ ಚಿಕ್ಕ ರಾಜ್ಯಗಳಲ್ಲಿ ಆಗಲೇ ಕಮ್ಯೂನಿಸ್ಟರ ಅಧಿಕಾರವನ್ನು ನೆಲೆಗೊಳಿಸಿ ತದಿತರ ಮುಖಂಡರನ್ನು ಬೇಟೆಯಾಡಲು ಹಚ್ಚಿದೆ. ಮೊನ್ನೆ ಮೊನ್ನೆ ಜೆಕೋಸ್ಲೋವೇಕಿಯದಲ್ಲಿ ಇಂಥದೊಂದು ಪ್ರಕರಣ ನಡೆಯಿತು ಕಳೆದ ಮಹಾ ಯುದ್ಧದಿಂದ ಬಹಳ ನಷ್ಟಕ್ಕೆ ಗುರಿಯಾದರೂ ಅತಿ ರಭಸದಿಂದ ಆತ್ಮರಕ್ಷಣೆಗಾಗಿ ಸಿದ್ಧತೆ ನಡೆಸಿದೆ. ಅಮೇರಿಕವಾದರೋ ಚೀನದಲ್ಲಿಯ ಕಮ್ಯೂನಿಸ್ಟರನ್ನು ಬಗ್ಗು ಬಡಿಯಲು ಅಸ್ತ್ರಧಾರೆಯಿಂದ ಸಹಾಯವನ್ನು ಸಲ್ಲಿಸುತ್ತಿದೆ. ಕೋಟಿಗಟ್ಟಲೆ ಡಾಲರನ್ನು ನೀಡುವ ಯೋಜನೆಮಾಡಿರುವುದಲ್ಲದೆ ಇತ್ತೀಚೆಗೆ ಒಂದು ಸಾವಿರ ಯುದ್ಧ ವಿಮಾನಗಳನ್ನು ಚಿಯಾಂಗರ ನೆರವಿಗಾಗಿ ಕಳುಹಿಸಿ ಕೊಟ್ಟಿದೆ. ಇದೇ ಪ್ರಕಾರ ಗ್ರೀಸ್, ತುರ್ಕಿ ಮುಂತಾದ ರಾಷ್ಟ್ರಗಳಿಗೂ ಜನ, ಧನ ಶಸ್ತ್ರಾಸ್ತ್ರಗಳನ್ನು ಅವಿಶ್ರಾಂತವಾಗಿ ರವಾನಿಸುತ್ತಿದೆ.

ಜಗತ್ತಿನ ಲಕ್ಷ್ಯವೆಲ್ಲ ಮೇಲಿನ ಕಾರಣಗಳಿಗಾಗಿ ರಷ್ಯ ಅಮೇರಿಕ

ಗಳತ್ತ ಕೇಂದ್ರೀಕೃತವಾಗಿದೆ. ಈ ಎರಡು ಪ್ರಬಲ ರಾಷ್
ಪ್ರಣಾಲಿ ಯಾವುದೇ ಇರಲಿ. ಪರಸ್ಪರರನ್ನು ತಡೆಗಟ್ಟಲು ಅ
ಸುತ್ತಿರುವ ಧೋರಣೆಗಳಿಂದ ಚಿಕ್ಕ ಪುಟ್ಟ ರಾಷ್ಟ್ರಗಳ ಜೀವ
ಕ್ಷಿತ ಮತ್ತು ಅನಿರೀಕ್ಷಿತ ಬದಲಾವಣೆಗಳುಂಟಾಗಲಾರಂ
ಕಾರ ಉರುಳುವುದು, ಮುಖಂಡರಿಗೆ ಚಿತ್ರ ಹಿಂಸೆಯಾಗುವು
ನ್ಯರಲ್ಲಿ ಅಶಾಂತಿ, ಅತೃಪ್ತಿಗಳು ತಲೆದೋರುವುದು, ಆರ್ಥಿ
ಹದಗೆಡುವುದು, ಒಳಸಂಚು ನಡೆಯುವುದು ಮತ್ತು ಅದು
ಗುವುದು ನಿತ್ಯದ ಮಾತಾಗಿದೆ. .ಇದರ ಮೇಲೆ ಸಂಯು
ಸಂಘವೆಂಬ ಒಂದು ಬೈಗುಳದ ಕಣವಿದೆ. ಅಲ್ಲಿ ಪ್ರತಿ
ಅಮೇರಿಕ ಮತ್ತು ರಷ್ಯಗಳ ಪ್ರತಿನಿಧಿಗಳು ಹಣಾಹಣಿ
ವುದು ಮತ್ತು ಚಿಲ್ಲರೆ ರಾಷ್ಟ್ರದ ಪ್ರತಿನಿಧಿಗಳು ಇದರಿಂದ ಬೆದ
ವುದು, ಸಾಗಿಯೇ ಸಾಗಿದೆ. ಸಂಯುಕ್ತ ರಾಷ್ಟ್ರ ಸಂಘದಲ್ಲಿ
ರಾಷ್ಟ್ರಗಳ ವಿಶ್ವಾಸವು ಹಾರಿ ಹೋಗತೊಡಗಿದೆ. ಪಂಚಮಹ
ಗಳ ಬಾಲ ಬಡಿದರೆ ಮಾತ್ರ ಅವುಗಳು ಅಲ್ಲಿ ಕುಳಿತು ಕೊ
ಇಲ್ಲವಾದಂಲ್ಲ. ಈ ಪಂಚಮಹಾಪ್ರಭುತ್ವಗಳೆಂದರೆ ಪಂಚ
ಕಿಗಳು—ಎಲ್ಲದರಲ್ಲೂ ಅಧಿಕ ಪ್ರಸಂಗದ ಮಾತು, ಸ್ವಾರ್ಥ
ಇದರ ಹೊರತು ನ್ಯಾಯಪಕ್ಷಪಾತವೆಂದೂ ಅವಕ್ಕೆ ಬೇಕಿಲ್ಲ.

ಈಗ ಕಾಶ್ಮೀರದ ಪ್ರಶ್ನೆಯನ್ನು ತೆಗೆದು ಕೊಂಡ
ಅನ್ಯಾಯ ಪರತೆಯೆನ್ನಲಾಗದಿದ್ದರೂ ನ್ಯಾಯೇತರ ಪರತೆ
ವಾಗಿ ಕಾಣಬಹುದು. ಪಾಕಿಸ್ಥಾನದ ಕುತರ್ಕಕ್ಕೂ ಹಿಂ
ಅಂತರ್ರಾಷ್ಟ್ರೀಯ ನ್ಯಾಯ.ದೃಷ್ಟಿಯ ಕಾರಣಬದ್ಧ ವಾದಕ
ಮನ್ನಣೆಕೊಡುವ ಅದರ ಯೋಗ್ಯತೆಗೆ ಕನ್ನಡಿ ಬೇರೆ ಹ
ಇಂಡೋನೇಶಿಯದ ವ್ಯಾಜ್ಯವನ್ನು ಅರ್ಧವಲ್ಲೇ ಮೂಲೆ
ಸಂಘವು ತಣ್ಣಗೆ ಕುಳಿತಿದೆ.

ನಾಗರಿಕತೆಯು ಏರುತ್ತ ಏರುತ್ತ ಹೋಗಿ ಗೌರೀಶಂಕ
ದೊಡನೆ ತಲೆಕೆಳಗಾಗಿ ಬಿದ್ದು ಬಿಡುವುದು ಇತಿಹಾಸಕ್ಕೇನೇ
"ಹದಿನಾರು ರಾಜರು ತಲೆಕೆಳಗಾದರು. ಆದರೂ ತಲೆ

ರುವೆ' ಎಂದು ಭೂಮಿತಾಯಿಯು ಹೇಳುವುದು ಸುಳ್ಳಲ್ಲ. ಒಂದು ಕಾಲದಲ್ಲಿ ಸಾಮಾನ್ಯರಿಗೆ ಸಾಮಾನ್ಯ ಸೌಖ್ಯ ಲಭಿಸಬಹುದು; ಅದು ರಾಮರಾಜ್ಯದ ಅಮೃತಕಾಲ. ಮರುಗಳಿಗೆಯಲ್ಲಿ ಅನೇಕ ಸಾವಿರ ವರ್ಷ ಜನಸಾಮಾನ್ಯರಿಗೆ ಅಸಾಮಾನ್ಯವಾದ ಅಸುಖ ಅಂಟಿಕೊಳ್ಳುವುದು–ಇದೇ ಚಕ್ರ ಅನಾದಿಯಿಂದ ತಿರುಗುತ್ತಿದೆ. 'ದಾತಾ ದರಿದ್ರಃ ಕೃಪಣೋಧನಾಢ್ಯಃ| ಪಾಪೀಚಿರಾಯುಃ ಸುಕೃತೀಗತಾಯುಃ||' ಎಂಬುದನ್ನರಿತೇ ಅಧ್ಯಾತ್ಮವಿದ್ಯಾವಿಶಾರದರು ಇಂದಿಗೂ ಪರಲೋಕದ ಪರಸುಖದ ಆರಾಧನೆಯನ್ನು ಬೋಧಿಸುತಿದ್ದಾರೆ. ಅವರನ್ನು ನಿರಾಶಾವಾದಿಗಳು, ಹುಚ್ಚರು, ವ್ಯವಹಾರ ಮೂಢರು ಎಂದು ನಾಗರಿಕರು ಹಾಸ್ಯಮಾಡುತ್ತಾರೆ. ಇದನ್ನು ನೋಡಿಯೇ "ಒಂದು ಶೋಕವು, ಬರಿಯ ಶ್ಲೋಕವು, ಬದುಕೆನ್ನೊಂದು ಜಂಭವು" ಎಂದು ಕವಿಯು ಹಾಸ್ಯ ಮಾಡಿದ್ದಾನೆ.

ಮತ್ಸ್ಯಪುರಾಣದಲ್ಲಿ ದೊಡ್ಡ ಮೀನು ಸಣ್ಣದನ್ನು ನುಂಗುವ ಮತ್ಸ್ಯನ್ಯಾಯವನ್ನು ಹೇಳಿದ್ದಾದರೂ Might is Right-ಬಲವೇ ಹಕ್ಕು ಎಂಬುದನ್ನು ಸಮರ್ಥಿಸುವುದಕ್ಕಾಗಿಯೇ.

ಪ್ರೀತಿ ತತ್ವಬೋಧಕರು Love is God- ಪ್ರೀತಿಯೇ ದೇವರು ಎಂದು ಬೋಧಿಸಿ ಜಗತ್ತಿನ ಡೊಂಕನ್ನು ತಿದ್ದಲು ಮದ್ದನ್ನು ತಯಾರಿಸಿದರು. ಮೊನ್ನೆ ನಡಿದ ಮಹಾತ್ಮಾ ಗಾಂಧಿಯವರು ಇಂತಹ ಪ್ರೇಮತತ್ವಾರಾಧಕರು. ಅವರು ಬದುಕಿದ್ದಾಗ ಜಗತ್ತಿನ ಬಹುಸಂಖ್ಯಾಕರು ಅವರ ಮಾತಿಗೆ ಕಿವಿಗೊಡಲಿಲ್ಲ; ಸತ್ತಮೇಲೆ ಸ್ವಾಭಾವಿಕ ಮತ್ತು ಕೃತಕ ಕಣ್ಣೀರನ್ನು ಮುಖಂಡರೂ ತದಿತರರೂ ಕರೆದರು. ಮುಗಿಯಿತು; ಅವರ ತತ್ವಗಳು ಅವರೊಡನೆಯೇ ಹೊರಟುಹೋದವೆಂದು ಜಗವಿಂದು ತಿಳಿದಂತಿದೆ. ಯಾವ ಅವತಾರಪುರುಷನೂ ಜಗತ್ತನ್ನು ಇಡಿಯಾಗಿ, ಸಂಪೂರ್ಣವಾಗಿ, ಚಿರಕಾಲದ ವರೆಗೆ ತಿದ್ದಿಡಲಾರ. ಇದೇ ಮಾತು "ಎಲ್ಲ ದೇವರು ಬಂದು ತಲ್ಲಣಗೊಂಡರು | ಇಲ್ಲಿಯವರ ಕಾಟ ಇಲ್ಲ್ಯಾಳಿಯಿತಲ್ಲೋ ಇಲ್ಲ್ಯಾಳಿಯಿತಲ್ಲಾ" ಎಂಬ ಸಾಲುಗಳಲ್ಲಿ ಒಡಮೂಡಿದೆ. ಇದು ಇತಿಹಾಸ ತೋರಿದ ಸತ್ಯ. ಆದರೆ ಎಷ್ಟು ಸಲ ಸೋತರೂ ಈ

ಪ್ರಯತ್ನ ನಡೆದೇ ನಡೆಯುತ್ತಿದೆಯೆಂಬುದೂ ಆದರಿಂದ ವಿಶಿ
ಕಾಲಗಳಲ್ಲಿ ಉದ್ದಿಷ್ಟ ಫಲಸಿಗುತ್ತಿದೆಯೆಂಬುದೂ ಅಷ್ಟೇ ಸತ್ಯವಾ
ಇದರಿಂದಲೇ Life means strife-ಬಾಳೆಂದರೆ ಹೋರಾಟ
ಹೇಳಲಾಗಿದೆ. ಬದುಕಬೇಕೆಂಬ ಆಸೆಯಿಂದ ಬಿಡಿಸಿಕೊಳ್ಳಲಾರ
ಪ್ರೀತಿತತ್ವ ಹಿಡಿದು ಶಾಂತಿಗಾಗಿ ಅಜಸ್ರವಾಗಿ ಹೋರಾಡು
ಬಿಟ್ಟರೆ ಬೇರೆಯ ಮಾರ್ಗವೇ ಇಲ್ಲ. ಪ್ರೀತಿಸುವುದೊಂದು
ಗುಣ, ನಾಗರಿಕ ಲಕ್ಷಣ, ಸಾಧುತ್ವದ ಗುರುತು. ಪುಣ್ಯದಾಯಕ
ಎಂದು ತಿಳಿದು ಹಾಗೆ ಮಾಡಬೇಕೆಂದರೆ ಅದು ನಮಗೆ ಬೇಕಾಗಿಲ್ಲ
ವಿಜ್ಞಾನಿಗಳೆನ್ನಬಹುದು. ಆದರೆ ಪ್ರೀತಿಸುವುದೊಂದು ಉತ್ತಮ
ಸಾಧನ, ಆದರಿಂದ ಜೀವನದ ಅನೇಕ ಸಮಸ್ಯೆಗಳನ್ನು ಅತಿ ಸುಲಭ
ಬಿಡಿಸಬಹುದು; ಶಾಂತಿ ಸಮಾಧಾನಗಳನ್ನು ಚಿರಕಾಲ ಪಡೆಯಬಹ
ಎಂದು ಕೇವಲ ಪ್ರಯೋಜನ ದೃಷ್ಟಿಯಿಂದ ಹೇಳಿದರೂ ಒಪ್ಪದ
ಗೇನು ಹೇಳಬೇಕು? ವಿಚಾರಪರತೆ ಹೆಚ್ಚಿದೆಯೆಂದು ಹೇಳಿಕೊಳ್ಳ
ತ್ತಿದೆಯಾದರೂ ಆ ವಿಚಾರವನ್ನು ಆಚಾರಕ್ಕಿಳಿಸುವ ಕರ್ತವ್ಯ
ಇಂದಿನ ಜಗತ್ತಿಗೆ ಸಾಕಷ್ಟಿಲ್ಲ. ಅದೊಂದು ಸಾಧಿಸಿತೆಂದರೆ ಗಾಂ
ವರೆಂದಂತೆ ಪೋಲೀಸಿಲ್ಲದೆ ರಾಜ್ಯ ನಡೆಸಬಹುದು. ಆಗ ಜೀವನವ
ಹೋರಾಟವೆನಿಸದೆ ಸುಖವೆಂಬ ಅರ್ಥವನ್ನು ಅದು ತಾಳುತ್ತದೆ.
ಯಲ್ಲಿ ಸರ್ವದ್ವಂದ್ವಗಳೂ ಲಯ ಹೊಂದುವವು; ಸಮ
ಹೊಂದುವವು.

ವಿಶ್ವಶಾಂತಿಗೆ ಅಗತ್ಯವಾಗಿ ಬೇಕಾದುದೆಂದರೆ ಈ ಪ್ರೇಮ
ಶಾಂತಿಪಾಠ. ಪ್ರೀತಿವಂತರು ಮೃದುತ್ವ, ನಯ, ಔದಾರ್ಯ,
ಮುಂತಾದ ಸಾತ್ವಿಕಗುಣವುಳ್ಳವರಿರುತ್ತಾರೆ. ರಾಜರು ಇವ
ಹೇಡಿಗಳೆಂದು ಹೀಗಳೆಯಬಹುದು. ಆದರೆ ಸತ್ವಕ್ಕಿರುವ ಸತ್ವ
ಸತ್ವಶಾಲಿಗಳೇ ಬಲ್ಲರು; ಅದರಿಂದಾಗುವ ಆನಂದಸಿದ್ಧಿ ಅವರಿಗೆ
ಗೊತ್ತು. ಆದರಿಂದಲೇ ಮಹಾತ್ಮರು ಲೋಕದ ಯಾವ ಚಿತ್ರ
ಯಿಂದಲೂ ತಾವು ಹಿಡಿದ ವ್ರತವನ್ನು ಬಿಡುವುದಿಲ್ಲ. ಮನಃಶ
ಪ್ರೀತಿಗಿಂತ ಹೆಚ್ಚಿನ ಪೌಷ್ಟಿಕ ರಸಾಯನವಿಲ್ಲ. ಪ್ರೀತಿಯಿಂದ ಅ

ುವ ಧೈರ್ಯ ಸ್ಥಾಯಿಯಾದಾಗ ಆತ್ಮಬಲವೆನಿಸುವುದು. ಅದರ ಹಿರಿಮೆ
ಯನ್ನು ಕೊಂಡಾಡದ ಉಪನಿಷತ್ತಿಲ್ಲ: ಅದರ ಕೆಚ್ಚಿಗೆ ಬಾಗದ ಬಲಿಷ್ಠ
ಲ್ಲ; ನಿಷ್ಟೆಗೆ ಸೋಲದ ರಸಿಕನಿಲ್ಲ. ಹೊಸ ಜಗತ್ತನ್ನು ಕಟ್ಟ
ಬೇಕೆಂದು ಲೋಕಕ್ಕೆಂದು ಅಕ್ಷರಾದಿ ವಿದ್ಯೆಯನ್ನು ಕೊಡಹೋಗುವ
ಮುತ್ಸದ್ದಿಗಳು ಈ ಮಾತನ್ನು ಮರೆತಲ್ಲಿ ಅವರ ಯತ್ನ ಸಂಪೂರ್ಣ
ನೀರಿನಲ್ಲಿ ಹೋಮಮಾಡಿದಂತಾಗದಿರದು. ನಿಜವಾದ ವಿದ್ಯೆಯೆಂದರೆ
ಪ್ರೀತಿವಿದ್ಯೆ. ಅದು ಮಾನವನ ಇಹಪರ ಜೀವನಗಳ ಸಾರಸರ್ವಸ್ವ,
ಅತ್ಯಂತ ಸಿದ್ಧಿ, ಅಮೃತತ್ವಯೋಗ, ಶಾಂತಿಗೆ ಅದಲ್ಲದೆ ಮತ್ತೊಂದು
ಸಾಧನವಾಗಲಾರದು. ಜೀವನದ ನಾನಾ ಭಾವಗಳ ತುಮುಲ ಪ್ರೀತಿ
ಯಿಂದ ಮಾತ್ರ ಹಿಂಗಬಲ್ಲುದು. ಪ್ರೀತಿ ಬೆಳೆದಲ್ಲಿ ಹೃದಯ ವಿಕಾಸ
ವಾಯಿತೆನ್ನಬೇಕು. ಅದೊಂದು ಐಕ್ಯದ ಅಂಟು, ಸೌಖ್ಯದ ನಂಟು.
ಮನೆಯಲ್ಲಿ, ಊರಲ್ಲಿ, ರಾಜ್ಯದಲ್ಲಿ, ಜಗತ್ತಿನಲ್ಲಿ—ಹೀಗೆ ಆದು ಹಬ್ಬುತ್ತ
ಹೋಗುವಂತೆ ಯತ್ನಿಸುವುದೇ ಪ್ರಗತಿಯ ಸತ್ಪಥ,ಜೀವನದ ಧ್ರುವತಾರೆ.
ಮೇಲೆ ಹೇಳಿದ ಪ್ರಯೋಜನ ದೃಷ್ಟಿಯ ಸತ್ಯವನ್ನಾದರೂ ಮನಗಂಡು
ಜಗತ್ತಿನ ಸರಕಾರಗಳು ಮತ್ತು ಅವುಗಳ ರಚನೆಗೆ ಕಾರಣರೆನಿಸಿದ
ಪ್ರಜೆಗಳು ವಿಶ್ವಶಾಂತಿಯನ್ನೂ ತನ್ಮೂಲಕ ತಮ್ಮ ನಾಡಿನ, ತಮ್ಮ
ಊರಿನ, ತಮ್ಮ ಮನೆಯ ಶಾಂತಿಯನ್ನೂ ಬಯಸುವವರಾದರೆ ಇಲ್ಲಿ
ಹೇಳಿದ ಮಾತುಗಳನ್ನು ಮನನಮಾಡಬೇಕು. ಹಿಂದೂಸ್ಥಾನವಿಂದು
ಜಗತ್ತಿಗೆ ಮಾರ್ಗದರ್ಶನವೀಯಬಲ್ಲುದೆನಿಸಬೇಕಾದರೆ ಅದು ಈ ಪ್ರೇಮ
ವಿದ್ಯೆಯನ್ನು ಅಭ್ಯಸಿಸಿ ಜಗತ್ತನ್ನು ಪ್ರೇಮಧರ್ಮಕ್ಕೆ ಪರಿವರ್ತಿಸಬೇಕು.
ತಮ್ಮನಾಡಿನ ಪ್ರತಿಯೊಂದು ವ್ಯಕ್ತಿಯೂ ಈ ಪ್ರಯತ್ನದಲ್ಲಿ ತೊಡಗಿದರೆ
ದೊಡ್ಡ ದೊಡ್ಡ ರಾಜಕಾರಣಿಗಳ 'ಇಜಂ'ಗಳನ್ನು ಒಂದೇ ತುತ್ತಿಗೆ
ನುಂಗಿ ನೀರ್ಕುಡಿದು ರಾಮರಾಜ್ಯದ ಸ್ಥಾಪನೆಗೆ ಅಸ್ತಿವಾರವನ್ನು ಹಾಕ
ಬಹುದು. ಹಾಗೆ ಮಾಡದಿದ್ದರೆ 'ರಾಮರಾಜ್ಯ', 'ಸುರಾಜ್ಯ',
'ಸ್ವಾತಂತ್ರ್ಯ'ಗಳು ಕೇವಲ ಪುಸ್ತಕದಲ್ಲಿಯ ಬದನೆಯಕಾಯಿಗಳಾಗಿಯೇ
ಉಳಿದಾವು.

ಅಮೇರಿಕದ ವಿಚಾರವನ್ನೆತ್ತಿ ಬರೆಯುತ್ತ ಅಲ್ಲಿಯ ಪ್ರಸಿದ್ಧ

ಲೇಖಕರೊಬ್ಬರು, ಅಲ್ಲಿ ನಾಗರಿಕತೆ ಮುಂದುವರಿದಷ್ಟು
ಮುಂದುವರಿದಿಲ್ಲ ಎಂದು ಬರೆಯುತ್ತಾರೆ. ಎಂದರೆ ಬು
ಮಟ್ಟಕ್ಕೆ ಹೃದಯ ಹಾರಿಲ್ಲ ಎಂದರ್ಥ. ಇದರಿಂದಲೆ ಇಂ
ಬೋಧಕರು ಬಹಳ ಜನ ಸಿಗುತ್ತಾರೆ. ಆದರೆ ಧ್ಯೇಯ
ಬಹು ಸ್ವಲ್ಪ ಜನರು ಕೂಡ ಸುಲಭವಾಗಿ ಕಾಣಸಿಗುವುದಿ
ಶಾಂತಿಯ ಮಾತನ್ನು ಆಡುವವರು, ಯೋಜನೆ ತಯಾರಿ
ವವರು ಸಿಕ್ಕರೂ ಅದರ ಆಚರಣೆಗೆ ಬದ್ಧ ಕಂಕಣರಾಗುವ
ಗಳಿಲ್ಲ. ಇದೇ ಇಂದಿನ ರಾಷ್ಟ್ರಜೀವನದಲ್ಲಿಯ ಪರಸ್ಪ
ಸಂಶಯಗಳಿಗೆ ಕಾರಣ.

ಧರ್ಮ ಮತ್ತು ಜಾತಿಗಳ ಬಹುತ್ವದಿಂದ ಜಗತ್ತು ಬ
ನಷ್ಟಗಳಿಗೆ ತುತ್ತಾದುದನ್ನು ಇತಿಹಾಸದಲ್ಲಿ ಕಂಡು ಇಂದು
ಜಾತ್ಯಾತೀತತೆ ಮತ್ತು ನಾಸ್ತಿಕತೆಗಳನ್ನು ಶರಣುಹೋಗುವುದ
ನ್ಯ ರೂಢಿಯಾಗಿಬಿಟ್ಟದೆ. ಹಿಂದೂಸ್ಥಾನವಂತೂ ಕಟುತ
ವನ್ನು ಕಲಿತಿದೆ; ಪಂಡಿತ ನೆಹರುಗಳು ಕೂಡ ಸಂಘಟಿತ
ಗಳೆಂದರೆ ಮೈಯುರಿಯುತ್ತದೆಂದು ಬರೆದಿದ್ದಾರೆ. ಆದರೆ ಇಂ
ರಾಷ್ಟ್ರಗಳ ಸರ್ವ ಸಂಸ್ಕೃತಿಗಳೂ ವಿಶಿಷ್ಟ ಧರ್ಮಗಳ ಅವಲಂ
ಮಾನವರು ಸಾವಿರಾರು ವರ್ಷಗಳಿಂದ ಬೆಳೆಸಿಕೊಂಡು ಬಂದ
ಪರಿಪಾಕದ ಫಲಗಳೇ ಆಗಿವೆ ಮಾನವ ಹೃದಯವಿರುವ ವರೆಗೆ
ಸ್ಥಾನವಿದೆ.ಧರ್ಮವಿಲ್ಲದಲ್ಲಿ ಅಧರ್ಮವಿದ್ದೇ ಇರುವುದಲ್ಲದೆ ಕೇ
ತೀತತೆ ನೆಲಸದು.ಧರ್ಮಾತೀತತೆಯ ಮಟ್ಟಕ್ಕೇರಬೇಕಾದರೂ
ಒಂದು ಧರ್ಮ ಸಂಸ್ಕಾರ ಅಗತ್ಯವೆಂಬುದನ್ನು ರಾಮಕೃಷ್ಣ ಪ
ಮತ್ತು ಗಾಂಧಿಯವರ ಜೀವನಗಳಿಂದ ಕಂಡುಕೊಳ್ಳಬಹುದು
ರಿಂದ ಭಾವ ಶುದ್ಧಿಗೆ ಧರ್ಮ ಮೊದಲ ಮೆಟ್ಟಲು; ಆದರಿಂದ
ಯಾಗುವುದೆಂದು ಹೇಳುವುದು ಆಧುನಿಕತೆಗೆ ಒಪ್ಪವಾಗದಿರಬ
ದೃಷ್ಟಿಯಿಂದ ವಿಚಾರಿಸಿದರೆ, ಮತ್ತು ಮನುಷ್ಯನ ಪ್ರತಿಯೊಂ
ರಿಕ ಕಾರ್ಯವನ್ನೂ ಕೇವಲ ಕಾಯದೆ ಮತ್ತು ಪೋಲಿಸು ಬ
ಆಳಲಾಗದು ಎಂಬುದನ್ನು ಮನನ ಮಾಡಿದರೆ, ಸಾಮಾನ್ಯ

ಧರ್ಮದ ಅಗತ್ಯವೆಷ್ಟೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ವಿಶ್ವ
ಶಾಂತಿಗಾಗಿ ಪ್ರೇಮಸಂಸ್ಕಾರವನ್ನು ಜಗತ್ತಿನ ಜನತೆಗೆ ಕೊಡಬಯಸು
ವವರು ವೈಜ್ಞಾನಿಕವಾದ ವಿಶ್ವ ಧರ್ಮವೊಂದಕ್ಕೆ ಶರಣಾಗಬೇಕಾಗುವು
ದೆಂಬುದು ಅನಿವಾರ್ಯವಾದ ಅನುಮಾನ (Inference) ಅಲ್ಲವೇ?

ಸ್ವಾತಂತ್ರ್ಯದುಣಿಸು ಸರ್ವರಿಗೂ ಸಿಗಬೇಕಾದರೆ, ಚಿರಸ್ಥಾಯಿ
ಯೆನಿಸಬೇಕಾದರೆ ಧಾರ್ಮಿಕರಾಗಿರುವ ಸ್ವಾತಂತ್ರ್ಯ ಬೇಕು ಎಂದು
ರೆವರೆಂಡ್ ಪಿಟ್ಟೆಂಜರರು ಬರೆಯುವುದಾದರೂ ಮೇಲೆ ಹೇಳಿದ ವಿಚಾರ
ಪ್ರಣಾಲಿಯ ಹಿನ್ನೆಲೆಯಿಟ್ಟುಕೊಂಡೇ- ಅದೇ ಪ್ರಕಾರ ಅಂತರ್
ರಾಷ್ಟ್ರೀಯ ಪ್ರಮುಖರು ವಿಧರ್ಮವೊಂದನ್ನು ಸರ್ವಧರ್ಮಸಮನ್ವಯ
ಸಿದ್ಧಾಂತದ ಮೇಲೆ ರಚಿಸಿ ಅದಕ್ಕೆ ಶಾಂತಿಯನ್ನು ಅಭಿಮಾನಿ ದೇವತೆ
ಯಾಗಿ ತೆಗೆದುಕೊಂಡು, ರಣತೃಷೆಯುಳ್ಳ ರಾಷ್ಟ್ರಮುಖಂಡರ ಪಾಶವೀ
ಬುದ್ಧಿಯನ್ನು ಪಳಗಿಸಲು ಹೊರಡುವುದು ಅವಶ್ಯಕ. ಆದರೆ ಇಂತಹ
ಸತ್ಸಾಧನವನ್ನು ಆಚರಣೆಗೆ ತರಬೇಕಾದರೆ ಈಗಿರುವಂತೆ ಪ್ರತಿಯೊಂದು
ರಾಷ್ಟ್ರವೂ ಸಂಪೂರ್ಣ ಸ್ವತಂತ್ರವೆಂದು ಆ ಪ್ರಕಾರ ಭಿನ್ನಾಭಿಪ್ರಾಯ
ತಾಳುವುದನ್ನೇ ಸದಾ ಅನುಸರಿಸುತ್ತಿದ್ದರೆ ಸಾಧ್ಯವಾಗದು. ಆದುದರಿಂದ
ದುಷ್ಟರನ್ನು ಬಗ್ಗಿಸಿ ದಾರಿಗೆ ಹಚ್ಚಲು ಮೊದಲು ಸಾತ್ವಿಕ ತೇಜೋ
ವಂತರು ತಮ್ಮ ತಮ್ಮ ರಾಷ್ಟ್ರಗಳನ್ನು ಸಿದ್ಧಪಡಿಸಿ, ತನ್ಮೂಲಕ
ಈ ಗುರಿಯ ಆರಾಧನೆಯಲ್ಲಿ ಶ್ರದ್ಧೆಯುಳ್ಳ ರಾಷ್ಟ್ರಗಳು ಒಟ್ಟುಸೇರಿ,
ದುರಹಂಕಾರಿ ರಾಷ್ಟ್ರಗಳಿಗೆ ಚತುರೋಪಾಯ ಪ್ರಯೋಗದಿಂದ
ಶಾಂತಿ ಧರ್ಮವನ್ನು ಹಿಡಿವಂತೆ, ಒತ್ತಾಯಪಡಿಸ ಬೇಕು ಎಂದರೆ
ಪ್ರತಿಯೊಂದು ರಾಷ್ಟ್ರದ ಜನತೆಯೂ ತನ್ನ ಒಬ್ಬೊಬ್ಬ ಗಾಂಧಿಯವ
ರಂಥ ನಾಯಕನನ್ನು ನಿರ್ಮಿಸುವುದನ್ನು ತನ್ನ ಕರ್ತವ್ಯವನ್ನಾಗಿಟ್ಟು
ಕೊಳ್ಳಬೇಕು. ಇಡೀ ಹಿಂದೂಸ್ಥಾನದ ಅಭಿಪ್ರಾಯವನ್ನು ತಿದ್ದುವ
ಸ್ಥಾನವನ್ನು ಗಾಂಧಿಯವರು ಕೇವಲ ಸಾತ್ವಿಕವಾದ ಆಧ್ಯಾತ್ಮಿಕ
ಬಲದಿಂದ ಸಾಧ್ಯಮಾಡಿಕೊಂಡಿದ್ದುದು ನಿರಾಶಾವಾದಿಗಳಿಗೊಂದು
ಪ್ರತ್ಯುದಾಹರಣೆಯಾಗಿದೆ. ಹಾಗೆ ಪ್ರತಿಯೊಂದು ರಾಷ್ಟ್ರವೂ ಒಕ್ಕಟ್ಟಿಗೆ
ಕಾರಣವಾದ ಪ್ರೇಮ ಸೂತ್ರವನ್ನು ಒಳಗೊಂಡ, ವಿಶ್ವ

ಭ್ರಾತೃತ್ವ ಭೋಧಕವಾದ, ಶಾಂತಿಯೇ ಧ್ಯೇಯವಾಗಿರುವ ವಿಶ್ವಧ
ಸಂಸ್ಥೆಯನ್ನು ರಚಿಸಲು ಶಂಕುಸ್ಥಾಪನೆ ಮಾಡಬೇಕು; ತನ
ವಿಶ್ವಬಾಂಧವ್ಯವನ್ನು ಕ್ರಮೇಣ ಜನತೆಯಹೃದಯದಲ್ಲಿ ಬಿಂಬಿಸಿ
ವಾಗಿಯಾದರೂ ನಿಶ್ಚಿತವಾದ ಜಯದ ಮೆಟ್ಟಲನ್ನು ಏರುತ್ತ
ಬೇಕು. ಹಿಂದುಸ್ಥಾನದ ಧೋರಣವನ್ನು ವಿವರಿಸುತ್ತ ಮಹಾಸ
ಪಂಡಿತ ನೆಹರುಗಳು ಅಪ್ಪಣೆಕೊಡಿಸಿದಂತೆ ಕಾರ್ಯಪ್ರಸಂ
ಈಗ ಆತ್ಮ ರಕ್ಷಣೆಗೆ ಸಿದ್ಧತೆನಡೆಸಿ ನಮ್ಮ ಮನೆಯಲ್ಲಿ, ನಾಡಿನಲ್ಲಿ
ಅಜೇಯರೆನಿಸಿ ಮಾನವಕುಲದ ಏಳಿಗೆಗಾಗಿ ಉಕ್ತಧರ್ಮದ ಕೇ
ನ್ನು ತೆರೆದು ನಮ್ಮಲ್ಲಿ ಒಂದು ಶಾಂತಿಸಂಸ್ಥೆಯ ಬ್ರಹ್ಮಚಾರಿ ಸ
ದಲವೊಂದನ್ನು ಇಲ್ಲವೆ ಸ್ಕೌಟ್ ಇಲ್ಲವೆ ರೋವರ್ಸ್‌ದಲವನ್ನು ಸಂ
ಸಂಸ್ಥೆಯು ದೇಶವಿದೇಶಗಳಿಗೆ ಕಳುಹಿ, ಜಗತ್ತಿನ ತಾಮಸೀ
ಯನ್ನು ಪರಿಮಾರ್ಜನ ಮಾಡಲು ತೊಡಗುವುದರಿಂದ
ರಾಷ್ಟ್ರವು ತನ್ನ ಮತ್ತು ಉಳಿದೆಲ್ಲ ರಾಷ್ಟ್ರಗಳ ಸುಖಶಾಂತಿ ಸ
ಗಳನ್ನೂ ಸಾಧಿಸಬಲ್ಲುದು. ಎಷ್ಟು ಒದ್ದಾಡಿದರೂ ಈ ಗುರಿಗೆ ಇ
ಳಿದು ಬೇರೊಂದು ಸಾಧನ ಇಷ್ಟು ಚಿರಪರಿಣಾಮಕಾರಿಯೆನಿಸಿ
ಯೋಗಕ್ಕೆ ಬರದು. ನಾಡಿನ ವಿಚಾರ ಶೀಲರು, ಕರ್ಮಯೋಗಿ
ಜಗದ್ಧಿತೇಚ್ಛುಗಳು ಇದಕ್ಕಾಗಿ ಚಳವಳ ಹೂಡುವುದು ಅನಿವಾ
ಲ್ಲವೇ? ಇದರಿಂದ ದಿವಂಗತ ಗಾಂಧಿಯರು ಕನಸು ಕಂಡ ವಿಶ್ವಶ
ಭದ್ರವಾದ ತಳಹದಿಯನ್ನು ಹಾಕಿದಂತಾಗುವುದಿಲ್ಲವೆ? ನಾಡಿನ
ಜಗತ್ತು ತಮ್ಮ ದೀರ್ಘವಾದ ಆಯುಷ್ಯದಲ್ಲಿ ಕೆಲ ನಿಮಿಷಗಳನ್ನಾ
ಉಕ್ತಧ್ಯೇಯದ ಆರಾಧನೆಗೆ ಬಳಸಲು ಮನಸ್ಸು ಮಾಡುವುದೇ?

ಓಂ ಶಾಂತಿಃ, ಶಾಂತಿಃ, ಶಾಂತಿಃ

## ರಾಷ್ಟ್ರೀಯ ಪುನರುಜ್ಜೀವನ

ಅಮೇರಿಕವೆಂದರೆ ಕುಬೇರನ ರಾಜ್ಯ, ಸ್ವರ್ಗ ಸುಖವೇ ಅಲ್ಲಿ ನೆಲ
ಸಿದೆ. ನಾಗರಿಕತೆಗೆ ಅಲ್ಲಿಯೇ ಕಲಶವನ್ನಿಡಲಾಗಿದೆ,—ಎಂದು ಹಲವ
ರೆಂದು ತಿಳಿದುಕೊಂಡಿರುವುದು ಪ್ರಚಾರದ ದೋಷದಿಂದ. ರಾಮರಾಜ್ಯ
ದಲ್ಲಿಯೂ ಒಬ್ಬ ಕುಬುದ್ಧಿಯು ಅಗಸನಿದ್ದನಂತೆ. ಈ ನಿದರ್ಶನದಂತೆ
ಯಕ್ಷಲೋಕದಂತಹ ಅಮೇರಿಕದ ಆ ಸಂಯುಕ್ತ ಸಂಸ್ಥಾನದಲ್ಲಿಯೂ
ತಾಮಸ ವೃತ್ತಿಗೇನೂ ಕಡಿಮೆಯಿಲ್ಲವೆಂದು ಕ್ಲಾಯ್ಡ್ ಜೆಡೆಲನು ಅಲ್ಲಿ
ಕುಳಿತುಕೊಂಡೇ ಬರೆದು ಬಿಟ್ಟಿದ್ದಾನೆ. ಏನೆಂದು?—"ನೀನೇನಾದರೂ
ಅಮೇರಿಕದವನಾಗಿರುವೆಯಾದರೆ; ಅಲ್ಲಿ ನೆಲಸಿರುವೆಯಾದರೆ, ನಿನ್ನ ಆ
ಸರಕಾರವೂ ನಿನ್ನ ಆ ಸ್ವತಂತ್ರ ರಾಜ್ಯವೂ ಸ್ವಲ್ಪ ಕಾಲದಲ್ಲಿಯೇ,
ಈಗಿಂದಲೇ ತಕ್ಕ ಪ್ರಯತ್ನಮಾಡದಿದ್ದರೆ, ಖಂಡಿತ ಉರುಳಿ ಬೀಳುತ್ತದೆ!"

"ತಮ್ಮ! ನಿನ್ನ ಮನೆಗೆ ಬೆಂಕಿ ಬಿದ್ದಿದೆ!" ಎಂದು ಮೇಲೆ ಹೇಳಿದ
ಆ ಬರಹಗಾರನು ಹೇಳ ಬೇಕಾದರೆ ಅಮೇರಿಕನರಿಂದು ಅದೆಂತಹ ಸ್ಥಿತಿ
ಯಲ್ಲಿರಬೇಕಾಯಿತು?

> ಚದುರರ ಮೆಚ್ಚು, ಭಾವುಕರ ಕೈಪಿಡಿ, ಜಾಣರ ಬಯ್ಕೆ, ಸತ್ಕಲಾ—
> ವಿದರ ವಿಲಾಸಮುಕ್ಕರಿಗರಾಭರಣಂ, ಬುಧರಿಚ್ಛೆಯಚ್ಚು, ವೀ—
> ರದ ಕಣಿ, ಕೂರ್ತುರ್ಕೂರಿಸಿದ ನಲ್ಲಳ ಮೆಯ್ಸಿರಿ, ತಾನೆನಿಪ್ಪ ಸ—
> ಮೃದ್ಧದೊಳೆ ಬಣ್ಣಿಕುಂ ಧರಣಿ, ಪಶ್ಚಿಮರಾಜ್ಯದ ವೈಭವಂಗಳಂ"—

ಎಂಬ ಈ ಪ್ರಚಾರಕ್ಕೆ ಮರುಳಾದವರಿಂದು ಕಣ್ದೆರೆಯಬೇಕು.

ಒಂದೂರಿಗೆ ಹೋದಾಗ, ಕಾರಣಾಂತರದಿಂದ ಉಳಿಯುವುದಕ್ಕೆ
ಸ್ಥಳವು ಸಿಕ್ಕದ ಕುಬೇರನೊಬ್ಬನು—"ನನಗೇನು? ಸೆಟ್ಟಿ ಇಳಿದಲ್ಲಿಯೇ
ಪಟ್ಟಣ! ಸಂಕವು ಮುರಿದಲ್ಲಿಯೇ ಸ್ನಾನ! ಏನು ನನಗೆ ಬೇಕಾದರೂ,
ಯಾವಾಗಲೆಂದರೆ ಆಗ ನಾನು ಪಡೆಯಬಲ್ಲೆ!" ಎಂದು ಕೊಂಡು,
ಅಲ್ಲಿಯೇ ಸನಿಹದ 'ಒಬ್ಬಳ'ಲ್ಲಿ ಆ ರಾತ್ರಿ ತಾನು ಉಳಿದುಕೊಂಡುದಾಗಿ
ಹೇಳಿರುವನು. ಈ ಪ್ರವೃತ್ತಿ ಅಮೇರಿಕದ ಜನಗಳಲ್ಲಿ ದಿನೇ ದಿನೇ
ವೃದ್ಧಿಗೊಳ್ಳುತ್ತಿದೆಯೆಂದೂ, ಹೀಗೆಯೇ ಆ ನೀತಿ ಬೆಳೆಯುತ್ತ ಹೋದರೆ

ಅಲ್ಲಿಯ ಪ್ರಜಾಪತ್ತಿ ಅರ್ಥ ರಹಿತವಾಗುವದೆಂದೂ, ಅದೇ
ಮಹಾಶಯನೇ ಎದೆಗುದಿಯಿಂದ ಸಾರುತ್ತಿದ್ದಾನೆ.

'ವಿಶೇಷ ಹಕ್ಕು'ಗಳಿಗಾಗಿಯೆಂದು ಕೆಲವೇ ಮಂದಿ ಕೆಲ
ಅರ್ಹತೆ ಹೆಚ್ಚಿಲ್ಲದಾಗಲೂ, ಉಳಿದ ಬಹು ಮಂದಿಗೂ ಹೆಚ್ಚಾಗಿ
ಕೊಡುವ ಉಪಪ್ರದಾನ (ಲಂಚ) ಪದ್ಧತಿ ಅಲ್ಲಿಯ ಜನರ ಸ
ಳಲ್ಲಿ ಹರಡಿದೆ. ಹೋಟೇಲುಗಳಲ್ಲಿಯಂತೂ ಹೇಳುವುದೇ ಬೇ
ಕೊಟ್ಟರೆ ದೊರೆಯದ ಸಾಮಗ್ರಿಯೇ ಇಲ್ಲ! ನೀತಿ—ಅನೀತಿ,
ಪುಣ್ಯ, ಧರ್ಮ—ಅಧರ್ಮ, ಇವುಗಳ ವಿಚಾರ ಹರದಾರಿ
ಪ್ರಾಮಾಣಿಕರಾದವರು ಕೂಡ ಅಲ್ಪ ಸ್ವಲ್ಪ ಲಂಚವನ್ನು ಕೊ
ತೆಗೆದುಕೊಳ್ಳುವದೂ ವ್ಯಾಪಾರದ ನೀತಿಮತ್ತೆಗೆ ಒಪ್ಪುವ ಪ
ಕತೆಯೆಂದೇ ತಿಳಿದು ಆಚರಿಸುತ್ತಾರೆ.

ಒಳ್ಳೆಯ ಶೀಘ್ರಲಿಪಿಕಾರಿಯೊಬ್ಬಳು ಕೆಲಗಂಟೆಗಳು ಮಾತ್ರ
ಮಾಡಿ ಉಳಿದ ಕಾಲದಲ್ಲಿ ಸರಕಾರೀ ಅಪ್ಪಣೆಯನ್ನು ಪಡೆದೇ
ರಕ್ಕೆ ನಡೆದು ಬಿಡುತ್ತಾಳೆ. ಅದೇ ಕಾರ್ಯಾಲಯದ ಉಳಿದ
ಗಾರರು ವಾರಕ್ಕೆ ೪೦ ಗಂಟೆಗಳ ಕಾಲ ೧೨ರಿಂದ ೧೫ ಡಾಲರುಗ
ಯನ್ನು ತೆಗೆದುಕೊಂಡು ಕೆಲಸ ಮಾಡುತ್ತ ಬಿದ್ದಿರಬೇಕೆಂದರೆ,
ವುದಿಲ್ಲ. ಆಗ, ಆವರು ಮನಃಪೂರ್ವಕವಾಗಿ ಕೆಲಸಮಾಡ
ಸರಕಾರದಿಂದ ಯತ್ಕಿಂಚಿತ್ ದಕ್ಷಿಣೆಯನ್ನು ಪಡೆದು, ಅಷ್ಟಕ್ಕಷ್ಟೆ
ಮಾಡುತ್ತ, ಸೋಮಾರಿಗಳಾಗಿ ಕಾಲವನ್ನು ತಳ್ಳುವುದಕ್ಕೆ
ಯುತ್ತಾರೆ. ಅಂತಹ ಪರಿಸ್ಥಿತಿಯಲ್ಲಿ ಅದೇ ಆವರಿಗೆ ಉತ್ತಮ
ತ್ತದೆ. ಇದಕ್ಕೆಲ್ಲ ಯಾರು ಹೊಣೆ?

ಉಪಾಧ್ಯಾಯರನ್ನು ತೆಗೆದುಕೊಳ್ಳಿರಿನ್ನು. ಸಾಮಾನ್ಯವಾ
ರಿಗೆ ಕೆಲಸವು ಹೆಚ್ಚು, ಸಂಬಳವು ಕಡಿಮೆ; ಇದರ ಜೊತೆಗೆ,
ಪಡೆದ ಆ ಡಿಗ್ರಿಯ ಮತ್ತು ಸೇವಾಕಾಲದ ಮೇಲೆ ಅವರ ಸಂಬ
ನಿರ್ಣಯಿಸಲಾಗುತ್ತದೆಯಲ್ಲದೆ, ಅವರ ಯೋಗ್ಯತೆಯ ಮತ್ತು
ಕ್ಷಮತೆಯ ದೃಷ್ಟಿಯಿಂದ ಅದು ಸಲ್ಲುತ್ತಿಲ್ಲ. ಪ್ರಜಾಸತ್ತೆಯ
ಕ್ಕಾಗಿಯೇ ಇದೆಲ್ಲ ಆಗುತ್ತಿರುವುದೇನು?

ಯಾವ ಸಂಘವನ್ನು ಅಥವಾ ಸಂಸ್ಥೆಯನ್ನು ತೆಗೆದುಕೊಂಡರೂ, ಅದು ತನ್ನ ಹಕ್ಕಿಗಾಗಿ ಮಾತ್ರ ಹೊಡೆದಾಡುವುದಲ್ಲದೆ, ತಮ್ಮ ಗುಂಪಿನ ಧ್ಯೇಯವನ್ನು ಅನುಸರಿಸದೆ ಉಳಿದವರಿಗೆ ಯಾವ ರೀತಿಯ ನೆರವನ್ನೂ ನೀಡುತ್ತಿಲ್ಲ. ಕೇವಲ ಸಂಕುಚಿತ ಕುಟುಂಬದಂತೆಯೇ ಅದು ನಡೆಯುತ್ತದೆ. ಸಂಬಳವನ್ನು ಇಲ್ಲಿ ದುಡಿಯುವುದಿಲ್ಲ: ದುಡಿಯದೆಯೇ ಯೇನಕೇನಪ್ರಕಾರೇಣ ಸಿಕ್ಕಿದಷ್ಟನ್ನು ಪಡೆಯುವುದೇ ಹೆಚ್ಚು. ದುಡಿವವರು ದುಡಿದೇ ಸಾಯುತ್ತಾರೆ; ಉಂಡಾಡಿಗಳು ಉಂಡೇ ಸಾಯುತ್ತಾರೆ. ಈ ಅವ್ಯವಸ್ಥೆಯಿಂದ ಉತ್ಪಾದನವು ಗಂಟೆಯೊಂದಕ್ಕೆ ಎಷ್ಟು ಆಗಬೇಕೋ ಅಷ್ಟು ಆಗುವುದಿಲ್ಲ.

ವ್ಯಾಪಾರಿಗಳು, ರಾಜತಂತ್ರಜ್ಞರು, ಶಿಕ್ಷಕರು, ರೈತರು—ಇವರಲ್ಲಿ ಕೇವಲ ಯಾರೊಬ್ಬರು ಮಾತ್ರ ಪರಿವರ್ತನ ಪಡೆದರೂ ಸಾಲದು; ಎಲ್ಲರೂ ಪರಿವರ್ತನ ಪಡೆಯಬೇಕು. ಅದರಲ್ಲಿಯೂ, ಹಿಂದು ಮುಂದಿನ ಆಲೋಚನೆಯಿಲ್ಲದೆ, ತಮ್ಮ ತಮ್ಮ ಹೊಣೆಗಾರಿಕೆಯನ್ನರಿಯದೆ, ಶಿಸ್ತಿಲ್ಲದೆ, ಸುಮ್ಮನೆ ಪ್ರಜಾ ಸೃಷ್ಟಿಗೆ ಕಾರಣರಾಗುತ್ತಿರುವ ತಾಯ್ತಂದೆಯರು ಎಲ್ಲರಿಗೂ ಮೊದಲು ತಮ್ಮ ದೃಷ್ಟಿಕೋನವನ್ನು ಬದಲಾಯಿಸಬೇಕು. ಯಾವ ದೇಶದಲ್ಲಿಯೇ ಆಗಲಿ, ನಾಗರಿಕತೆ ಉಳಿಯಬೇಕಾದರೆ, ಅಲ್ಲಿಯ ನಾಗರಿಕರು ಈ ಕೆಳಗಿನ ಅಷ್ಟ ವಿಧಿಗಳನ್ನು ತಪ್ಪದೆ ಪರಿಪಾಲಿಸಬೇಕಾಗಿದೆ:—

೧ ಅಸ್ತೇಯ:—ಕಳಬೇಡ; ಲಂಚ ಕೊಡುವುದೂ ಒಂದು ಕಳ್ಳತನವೇ.

೨ ದೋಷಜ್ಞತೆ:—ನಿನ್ನ ಸುತ್ತುಮುತ್ತಲಿನ ಆ ಕಿಡುಗತನಕ್ಕೆ ಬಲಿಯಾಗದೆ, ನ್ಯಾಯಕ್ಕಾಗಿಯೂ ಸಾಮ್ಯಕ್ಕಾಗಿಯೂ ಹೋರಾಡು.

೩ ಆತ್ಮ ಸಂಯಮ ಮತ್ತು ಸ್ವಾರ್ಥತ್ಯಾಗ:—ಇವುಗಳ ವಿಚಾರವಾಗಿ ನಿಮ್ಮವರೊಂದಿಗೂ ಇತರರೊಂದಿಗೂ ಚರ್ಚಿಸುವುದು ಮಾತ್ರವಲ್ಲದೆ, ಆಚರಿಸಲೂ ಯತ್ನಿಸು.

೪ ವಿಶಾಲ ಭಾವನೆ:—ಕುಟುಂಬದ ಹೊರಗೂ ಯಾವುದಾದರೊಂದು ಸಾಮಾಜಿಕ ಹೊಣೆಯನ್ನು ನಿರ್ವಹಿಸು.

**೫ ಸೋಮಾರಿಗಳ ಸಂಘಟನದ ಕುರಿತು ತಿರ**
ತರುಣರೊಡನೆ ಈ ವಿಷಯವಾಗಿ ಚರ್ಚಿಸಿ, ಸಾಮೂಹಿಕ ಸೆ
ತನವನ್ನು ನಿರ್ಮೂಲಗೊಳಿಸುವುದಕ್ಕೂ ವೈಯಕ್ತಿಕ ಉದ್ಯಮ
ಗಳನ್ನು ಏಳಿಗೆಗೆ ತರುವುದಕ್ಕೂ ಪ್ರಯತ್ನಿಸು.

**೬ ಮಾನವತೆಯ ಪುರಸ್ಕಾರ:** - ಹಣದಿಂದಲೂ ಹೃ
ಹೆಚ್ಚಿನದೆಂದೂ, ಸಮಾಜ ಸೇವೆಯೇ ಹೆಚ್ಚಿನದೆಂದೂ, ಕ
ಯೆಂಬುದು ಸಮಾಜದ ಕೊಲೆಯೆಂದೂ, ವ್ಯಾಪಾರೀ ವರ್ಗಕ್ಕೆ ಬ

**೭ ಪಿತೃತ್ವಭಾರ:**—'ನಾನು ತಂದೆ ಅಥವಾ ತಾಯಿ
ಹೊಣೆಗಾರಿಕೆಯ ಕರ್ತವ್ಯ ಬುದ್ಧಿಯನ್ನು ನಿಶ್ಚಯಾತ್ಮಕ ಬುದ್
ತಿಳಿದುಕೊಂಡು, ಹೊಣೆಯನ್ನೂ ಶಿಸ್ತನ್ನೂ ನಿನ್ನ ಮಕ್ಕಳಿಗೂ ಕಲ

**೮ ಪಾತ್ರ ನಿರ್ವಹಣ:**—ನಿನ್ನ ಪಾಲಿಗೆ ಬಂದ ಕರ್ತ
ಚಾಚೂ ತಪ್ಪದೆ ಮಾಡಿಕೊಂಡು ಹೋಗು; ಅಧೋಮುಖವ
ಪ್ರಜಾಸತ್ತೆಯ ಪುನರುದ್ಧಾರಕ್ಕಾಗಿ ನಿನ್ನ ಜೀವನದ ಕೆಲವೇಳ
ಮೀಸಲಿಡು.

ಅನೈತಿಕ ಬುದ್ಧಿಯ ಬಳಕೆಯನ್ನು ತಡೆದು, ಒಂದು ರಾ
ನಿಜವಾದ ಪ್ರಜಾಪ್ರಭುತ್ವವು ನೆಲೆನಿಲ್ಲಬೇಕಾದರೆ, ಅಲ್ಲಿಯ
ಅಥವಾ ನಾಗರಿಕನು ಸ್ತ್ರೀಪುರುಷ ಭೇಧವಿಲ್ಲದೆ ಈ ಮೇಲಿನ ಅ
ಮಗಳನ್ನು ಶಕ್ತಿ ಮೀರಿ ಪಾಲಿಸತಕ್ಕದ್ದು ಅನಿವಾರ್ಯವೆಂ
ಯಾರೂ ಅಲ್ಲಗಳೆಯಲಾರರು. ಭಾರತಕ್ಕೂ ಇದೊಂದು ಕರ್ತವ
ಸ್ಮರಣಕ್ಕೆ ಕಾರಣವೆನಿಸುವ ಸದ್ಬೋಧ; ಅಲ್ಲದೆ, ಹಿಂದಿನ ನ
ಧರ್ಮಶಾಸ್ತ್ರಕಾರರ ನೀತಿಸಾರವನ್ನು ಆಚರಣೆಗೆ ತರಲೂ
ಪ್ರಚೋದಕವೆನಬಹುದಲ್ಲವೇ?

ಜನರು ಪ್ರಜಾಸತ್ತೆಯ ತತ್ವಗಳನ್ನು ಮೀರಿ ನಡೆಯುವುದೇ
ಸತ್ತೆಯ ಮೃತ್ಯು. ಪ್ರಜಾಸತ್ತೆಯಲ್ಲಿ ಸ್ವಾತಂತ್ರ್ಯದ ಅನುಭವ
ರಿಗೆ ಇರುವ ಸಮಾನಸ್ವಾತಂತ್ರ್ಯಕ್ಕೆ ಭಂಗವು ಬಾರದಂತೆಯೇ
ಸಾಗಬೇಕು. ಅದೆಲ್ಲಿ ಇಲ್ಲವೋ ಅಲ್ಲಿ ಪ್ರಜಾತಂತ್ರವೆಂಬುದಿಲ್ಲ;
ಯೆಂಬುದಿಲ್ಲ; ನಾಗರಿಕತೆಯೆಂಬುದೂ ಇಲ್ಲ. ಅಲ್ಪ ಸಂಖ್ಯಾಕರ

ಕ್ಕಾಗಿ ಬಹುಸಂಖ್ಯಾಕರು ದುಡಿದು ಬಳಲುವುದು ಪ್ರಜಾಪ್ರಭುತ್ವಕ್ಕೆ ಶತ್ರು; ಸರ್ವಸಮ ಸುಖವೇ ಅದರ ಜೀವಾಳ.

ಕರ್ತವ್ಯ— ನೀತಿ,ನ್ಯಾಯಗಳಿಂದ ಎಲ್ಲಿ ವ್ಯಕ್ತಿಗಳು ಪರಾಙ್ಮುಖರಾಗುವರೋ ಆ ನಾಡು ಪ್ರಜಾಸತ್ತೆಯ ಮಸಣವೆನಿಸುತ್ತದೆ. ಇಂತಹ ದುಷ್ಕಾಲವು ಪ್ರಾಪ್ತವಾಗಿರುವುದನ್ನು ಕಂಡು, ಅಮೇರಿಕದ ಆ ಮೇಲಿನ ಲೇಖಕನು ತನ್ನ ನಾಡುಗನನ್ನು ಕುರಿತು "ತಮ್ಮಾ! ನಿನ್ನ ಮನೆಗೆ ಬೆಂಕಿ ಬಿದ್ದಿದೆ, ನೋಡು; ಅದನ್ನು ಆರಿಸಲು ಪ್ರಯತ್ನಮಾಡು!"–ಎಂದು ಎಚ್ಚರಗೊಳಿಸುತ್ತಿದ್ದಾನೆ. ಮನೆಗೆ ಬೆಂಕಿಬಿದ್ದಾಗ, ಅದನ್ನಾರಿಸಲು ಅಗ್ನಿಶಾಮಕದಳಗಳು ಬೇಕಾಗುವಂತೆ ಧನತೃಷ್ಣೆ ಕೆರಳಿರುವ ಅಮೇರಿಕದಂತಹ ನಾಡಿನಲ್ಲಿ ಶಾಂತಿಸ್ಥಾಪಕದಳ, ನೀತಿಬೋಧಕ ಮಂಡಲ, ಧರ್ಮ ಸಂಸ್ಥಾಪಕಸಾಧುಕುಲ, ನಿರ್ಭೀತ–ವಿಚಾರಪರ- ಕಾರ್ಯಕರ್ತೃಸೈನ್ಯ—ಇವು ತಲೆಯೆತ್ತಿ ಮುಂಬರದಿದ್ದರೆ, ಅಲ್ಲಿಯ ಜನಗಳ ಕರ್ತವ್ಯಮೌಢ್ಯವನ್ನು ಕಳೆಯದಿದ್ದರೆ, ಅದರ ವಿನಾಶವು ಕಟ್ಟಿಟ್ಟದ್ದೇ ಎಂದು ವಿವೇಕಿಗಳೆನ್ನದೆ ಇರರು.

ಅಮೇರಿಕದಲ್ಲಿ ಮೂಡಿರುವ ಈ ಎಚ್ಚರಿಕೆ ಭಾರತದಲ್ಲಿಯೂ ಎಲ್ಲೆಡೆ ಮೂಡಬೇಕಾಗಿದೆ. ನೈತಿಕ ಅವನತಿಯಲ್ಲಿ ಇಂದು ಭಾರತವೂ ಏನೂ ಹಿಂದುಳಿದಿಲ್ಲ. ಕ್ಷುದ್ರತೆ, ಕೇವಲ ಸ್ವಾರ್ಥ, ಅಲ್ಪತ್ವ, ಧನಲೋಭ, ವಂಚನೆ, ಲಂಚ, ಕಳ್ಳಸಂತೆ, ಇವೇ ಮೊದಲಾದ ತಾಮಸ ಗುಣಗಳು ವೃದ್ಧಿಪಡೆಯದಂತೆ, ಈಗ ಇಲ್ಲಿ ಪ್ರಮುಖವಾಗಿ ಹೊರಟಿರುವ ಸಂಘವೆಂದರೆ, ಮೊನ್ನೆಮೊನ್ನೆ ಜನ್ಮವನ್ನು ತಾಳಿರುವ ಆ "ಸರ್ವೋದಯ ಸಮಾಜ"ವೊಂದೇ. ಈ ಸಮಾಜವು ಶಾಖೋಪಶಾಖೆಗಳಾಗಿ ಬೆಳೆದು ಸ್ವೀಯ ಉದ್ದೇಶಗಳ ಸಾಧನೆಯಲ್ಲಿ ಯಶಸ್ವಿಯಾಗುವಂತೆ ಆಸೇತುಹಿಮಾಚಲದ ತರುಣತರುಣಿಯರು ನೆರವಿತ್ತು ದುಡಿವುದು ಅವಶ್ಯ.

ರಾಷ್ಟ್ರೀಯ ಪ್ರಜಾಸತ್ತೆಗೆ ಕೇವಲ ವಿರುದ್ಧ ಗುಣಗಳಾದ ಆ ಜಾತೀಯತೆ, ವರ್ಗ ಕಲಹ, ಪಕ್ಷಪ್ರತಿಪಕ್ಷಗಳ ದ್ವಂದ್ವ, ಇವೇ ಮೊದಲಾದ ಜ್ವಾಲೆಗಳಿಂದ ನಮ್ಮ ನಾಡು ಉರಿಯುತ್ತಿರುವ ಈ ಕಾಲದಲ್ಲಿ ಶಾಂತಿಯ ನೀರನ್ನೆರೆಯಲು ಸಾಧ್ಯವಾಗದಿದ್ದರೆ, ನಮ್ಮ ಈ ಹಿಂದೀ ಸ್ವಾತಂತ್ರ್ಯವು ಚಿರಕಾಲ ಬಾಳುವುದು ಸಂದೇಹಾಸ್ಪದವೇ ಸರಿ.

# ೫ ಸಾಹಿತ್ಯದ ಪ್ರಾಧಾನ್ಯ

ಶಾರೀರಿಕ ಆವಶ್ಯಕತೆಗಳನ್ನು ಪೂರಯಿಸಲು ಮಾನವ
ನಿಕ, ಔದ್ಯಮಿಕ ಇಲ್ಲವೇ ತಾಂತ್ರಿಕ ವಿದ್ಯೆಗಳನ್ನು ಅಭ್ಯಸಿಸು
ಅವಶ್ಯಕವೋ ಹಾಗೆ ಮಾನಸಿಕ ಅವಶ್ಯಕತೆಗಳನ್ನು ಪೂರಯಿ
ತ್ಯಾಭ್ಯಾಸವು ಅನಿವಾರ್ಯವಾದ ಅಗತ್ಯ. ದೇಶದ ಆರೋಗ್
ಸಿಕ ಆರೋಗ್ಯಕ್ಕೆ ತಳಹದಿ ಎಂಬುದು ನಿಜವೇ; ಆದರೆ ದೃ
ಮಾಡಿದರೆ ದೇಹದ ಪ್ರವೃತ್ತಿ ಪ್ರೇರಣೆಗಳನ್ನು ಮೀರಿ ನಿ
ಪ್ರಾಣಿಗಳ ಜೀವನವು ಕೇವಲ ದೈಹಿಕ; ಮಾನವನ ಜೀವನದ
ತಕ್ಕ ಸ್ಥಾನವಿದ್ದರೂ ಮನಸ್ಸೇ ಪ್ರಧಾನವಾದುದು. ಅ
ಮನುಷ್ಯತ್ವವನ್ನು ಬೆಳೆಯಿಸಿ ದೇವತ್ವದತ್ತ ಒಯ್ಯುವ ಸಾಧನ
ದರಿಂದ ಉದರಂಭರಣ ವಿದ್ಯೆಯ ಜೊತೆಗೆ ಸಂಸ್ಕೃತಿ ಪೋಷಣ
ಭ್ಯಾಸವಿಲ್ಲದೆ ಮಾನವನ ಜೀವನ ಸಾರ್ಥಕವೆನಿಸಲಾರದು.
ಯಿಂದ ಸಾಹಿತ್ಯಾಭ್ಯಾಸದ ಪ್ರಾಧಾನ್ಯವನ್ನು ಪ್ರತಿಯೊ
ನಾರಿಯೂ ಮನಗಾಣಬಹುದು.

ಮನಸ್ಸಿಗೆ ತಿಳಿವಳಿಕೆ ಕೊಡಲು, ಸಂಸ್ಕಾರ ಕೊಡ
ಶಾಸ್ತ್ರಗಳಿರುವುದು ನಿಜ. ಅವು ಜೀವನದ ಒಂದೊಂದು
ಎತ್ತಿಹಿಡಿದು ವಿಶೇಷ ಜ್ಞಾನಗಳನ್ನು ಬೌದ್ಧಿಕವಾಗಿ ತಿ
ಅವುಗಳಲ್ಲಿ ಒಂದೊಂದನ್ನೇ ತೆಗೆದುಕೊಂಡರೆ ಅವು ಸರ್ವ
ಜೀವನದ ವಿವಿಧಾಂಗಗಳನ್ನು ಸೋದಾಹರಣವಾಗಿ ಪ್ರತಿ
ಕನ್ನಡಿಗಳಲ್ಲ. ಕಲೆಗಳಲ್ಲೆಲ್ಲ ಶ್ರೇಷ್ಠವೆನಿಸಿದ್ದು ಸಾಹಿತ್ಯ;
ಮಾತು ಬರುತ್ತದೆ; ಉಳಿದ ಕಲೆಗಳು ಮೌನಿಗಳು. ಇಂಥ
ಮಹಾದ್ಭುತ ಶಕ್ತಿಯುಳ್ಳ, ಮನುಷ್ಯನಿಗೇ ವಿಶಿಷ್ಟವಾಗಿ ಇರುವ
ವಾದರೋ ಜೀವನದ ವಿವಿಧಾನುಭವಗಳನ್ನು ರಸರೂಪದಿಂದ
ದಲ್ಲಿ ಬಿಂಬಿಸಿ ರಸಿಕನಲ್ಲಿ ಸಮರಸಭಾವ, ಭೋಗಯೋಗ ಸ
ಭಾವ, ಸುಖದುಃಖ ಸಮತಾಭಾವ ಇವನ್ನು ಬೆಳೆಯಿಸಲು
ಯಾಗುತ್ತದೆ. ಜೀವನವನ್ನು ಅತಿಯಾಗಿ ಪುರಸ್ಕರಿಸುವ ಇ

ಯಾಗಿ ತಿರಸ್ಕರಿಸುವ ಹಟಕ್ಕೆ ಬೀಳದೆ "ಇದ್ದಷ್ಟು ದಿನವಾದರೂ ಇರುವಷ್ಟು ಪ್ರೀತಿಯ ಇನ್ನಷ್ಟು ರುಚಿನೋಡಿ ಹೋಗೋಣವೆ" ಎಂಬ ರಸ ತತ್ವವನ್ನು ಅದು ಹೃದ್ಗತಮಾಡಿ ಕೊಡುವುದು. ಇದೇ ಸಾಹಿತ್ಯದ ಹಿರಿಮೆ. ಮಾನವನಲ್ಲಿ ಮಾನವತೆಯನ್ನು ಮೂಡಿಸಲು, ವಿಶ್ವಕುಟುಂಬಿತ್ವವನ್ನು ಉದಯಿಸಲು, ಸಚ್ಚಿದಾನಂದವನ್ನು ಉದ್ಭವಿಸಲು ಸಾಧನವಾಗುವ ಸಾಹಿತ್ಯವೇ ಆದರ್ಶ ಸಾಹಿತ್ಯ. ಪ್ರಜಾಪ್ರಭುತ್ವದಲ್ಲಿ ಮಾನವನ ನಾಗರಿಕತೆಯನ್ನು ಸಂಧಾರಿಸುವ ದೃಷ್ಟಿಯಿಂದ ವಿದ್ಯಾಪ್ರಸಾರಕ್ಕೆ ಮಹತ್ವವನ್ನು ಕೊಡಲಾಗಿದೆ. ಆ ವಿದ್ಯೆ ಸದ್ವಿದ್ಯೆಯೆನಿಸಿಕೊಂಡು ಉದ್ದೇಶವನ್ನು ಸಾಧಿಸಿಕೊಡಬಲ್ಲುದಾಗಬೇಕಾದರೆ, ಅದು ತನ್ನ ಕೊನೆಯ ಮೆಟ್ಟಲಿನಲ್ಲಿ ಸಾಹಿತ್ಯಲೋಕವನ್ನೇ ಆಶ್ರಯಿಸಬೇಕಾಗುತ್ತದೆ.

ಮಾನವನಿಗೆ ವಿಚಾರ ಶಕ್ತಿಯಂತೆ ಮಾತಾದರೂ ವಿಶಿಷ್ಟವರ. ಆದರಿಂದ ಅವನಲ್ಲಿ ವಿಶಿಷ್ಟ ವ್ಯಕ್ತಿತ್ವ ಮೂಡುವಂತಾಗಿದೆ. 'ಮಾತು ಬಲ್ಲವನು ಮಾಣಿಕ ತರಬಲ್ಲ' ಎಂದು ಏಕೆ ಹೇಳುತ್ತಾರೆ? ಸಹ ಜೀವಿಗಳ ಹೃದಯವನ್ನು ಒಲಿಸಿಕೊಳ್ಳಲು ಸರಸವಾದ ಮಾತಿಗಿಂತ ಪ್ರಬಲವಾದ ಸಾಧನವಿಲ್ಲ. ಸರಸವೆಂದ ಕೂಡಲೆ ಸಾಹಿತ್ಯ ಬಂದಿತಲ್ಲಿಗೆ. ಮನುಷ್ಯನ ಮನಸ್ಸಿನ ಸ್ಥಾಯಿಭಾವಗಳಾದ ಪ್ರೀತಿ (ರತಿ) ಕಾರ್ಯೋತ್ಸಾಹ, ದಯೆ, ಆಶ್ಚರ್ಯ, ನಗೆ (ಹಾಸ್ಯ), ಶಮ, ಅಸಹ್ಯಭಾವ (ಜುಗುಪ್ಸೆ) ಭಯಪ್ರದರ್ಶನ (ಭಯಾನಕ), ಸಿಟ್ಟು ಎಂಬ ಒಂಬತ್ತನ್ನು ಮನಸ್ಸಿಗೆ ರಂಜಿಸುವಂತೆ ಪರಿಪೂರ್ಣಗೊಳಿಸಿ ಹೌದು ಹೌದೆನಿಸುವ ಮಾತೇ ಸಾಹಿತ್ಯ. ನಮ್ಮ ನಿತ್ಯ ಜೀವನದಲ್ಲಿ ನಾವು ಸದಾ ಇದನ್ನು ನಮಗೆ ಗೊತ್ತಿಲ್ಲದಂತೆ ಕೇವಲ ಸ್ವಾಭಾವಿಕವಾಗಿ ಬಳಸುತ್ತೇವೆ, ಅನುಭವಿಸಿ ಆನಂದಿಸುತ್ತೇವೆ, ಒಲಿದು ನಲಿಯುತ್ತೇವೆ. ಇದನ್ನೇ ಸ್ವಲ್ಪ ಪರಿಷ್ಕರಿಸಿ ವ್ಯಾಕರಣ ಶುದ್ಧವಾಗಿ ಬರೆದರೆ ಇದರಿಂದ ಕಥೆ, ಹರಟೆ ಮುಂತಾದ ಸಾಹಿತ್ಯ ಪ್ರಕಾರಗಳು ಹುಟ್ಟುತ್ತವೆ. ನಾವು ನಿತ್ಯವೂ ಮಾತಾಡುವಾಗ ಮಾಡುವ ಭಾವಸಹಜವಾದ ಅಂಗಚೇಷ್ಟೆಗಳನ್ನು ಸಂಸ್ಕರಿಸಿದರೆ ಅಭಿನಯವಾಗುವುದು. ನಮ್ಮ ಮಾತು, ನಡತೆ ಮತ್ತು ಉಡುಪುಗಳ ಆಧಾರದಿಂದಲೇ ನಾಟ್ಯ

ಶಾಸ್ತ್ರದಲ್ಲಿ ವಾಚಿಕ, ಆಂಗಿಕ ಮತ್ತು ಆಹಾರ್ಯ ಎಂದು ಅಭಿನಯ
ವನ್ನು ಮೂರು ವಿಧವಾಗಿ ವರ್ಗೀಕರಿಸಲಾಗಿದೆ.

ಜೀವನಕ್ಕೂ ಸಾಹಿತ್ಯಕ್ಕೂ ಇಂಥ ನಿಕಟ ಸಂಬಂಧವಿದೆ ಎಂಬ
ದನ್ನು ಗಮನಿಸದೆ ಇಂದು ಸಾರ್ವಜನಿಕರು, ಅದರಲ್ಲೂ ಉದ್ಯಮಿಗಳು
ಹಳ್ಳಿಗರು ಮತ್ತು ಸ್ತ್ರೀಯರು ಸಾಹಿತ್ಯವೆಂದರೆ ಕಥೆ, ಕಾದಂಬರಿ, ಸಿ
ಮವಷ್ಟೇ. ಅದರಿಂದ ಆಗುವ ಪ್ರಯೋಜನವೆಂದರೆ ನೋಡಿ ನಕ್ಕು ಬರ
ವುದಷ್ಟೇ—ಎಂದು ಗ್ರಹಿಸಿರುವುದು ಶೋಚನೀಯವಾಗಿದೆ. ಹೆಂಗಸ
ರಿಗೆ ಓದೇಕೆ? ಎಂಬ ಸವಾಲಿನಂತೆ ಸಾಹಿತ್ಯವೇಕೆ? ಎಂಬ ಸವಾಲನ್ನೂ
ಅವರೇ ಹಾಕಿಕೊಂಡು ನಿರ್ವಿದ್ಯರೂ ಅರಸಿಕರೂ ಆಗಿ ತಮಗೂ ಅನ್ಯ
ರಿಗೂ ಬೇಸರ ಬರುವ ಇತರ ಚಟುವಟಿಕೆಗಳನ್ನು ತಾತ್ಕಾಲಿಕ ವಿನೋದ
ಲಾಭಕ್ಕಾಗಿ ಆಶ್ರಯಿಸುತ್ತಿದ್ದಾರೆ. ಧರ್ಮ, ನೀತಿ, ಮಾನವತೆ, ಮಾನವ
ಸ್ವಭಾವ, ರಸ, ರುಚಿ, ಕಷ್ಟ, ಸುಖ, ನ್ಯಾಯ, ಅನ್ಯಾಯ, ದಯೆ,
ದಾಕ್ಷಿಣ್ಯ ಮುಂತಾದ ಸರ್ವಾಂಶಗಳನ್ನೂ ಸೋದಾಹರಣವಾಗಿ ಸೂಚ್ಯ
ವಾಚ್ಯ ಸರಸಪಂಕ್ತಿಗಳಿಂದ ಕತೆ, ಕಾದಂಬರಿ, ಗದ್ಯ, ಪದ್ಯ ಮುಂತಾದ
ನಾನಾ ಪ್ರಕಾರಗಳಿಂದ ಅನುಭವಕ್ಕೆ ತಂದು ಕೊಡುವ ಸಾಹಿತ್ಯವು
ಜೀವನ ವಿಕಾಸಕ್ಕೆ ಸಂಜೀವಿನಿಯಲ್ಲದೆ ಮತ್ತೇನು? ಪ್ರತಿಯೊಂದು
ವ್ಯಕ್ತಿಗೂ ಎಲ್ಲ ಸಂದರ್ಭಗಳಲ್ಲೂ ಧರ್ಮಕ್ಕಾಗಿ ಧರ್ಮ ಶಾಸ್ತ್ರವನ್ನೂ,
ನೀತಿಗಾಗಿ ನೀತಿಶಾಸ್ತ್ರವನ್ನೂ, ಮಾನವತೆಗಾಗಿ ತತ್ವಶಾಸ್ತ್ರವನ್ನೂ ಮಾನ
ವಸ್ವಭಾವದ ಪರಿಚಯಕ್ಕಾಗಿ ಮನಃಶಾಸ್ತ್ರವನ್ನೂ ವಿವೇಕ ವಿಚಾರಗಳಿ
ಗಾಗಿ ನ್ಯಾಯಶಾಸ್ತ್ರವನ್ನೂ--ಹೀಗೆ ಒಂದೊಂದು ಅಂಶಕ್ಕೆ ಒಂದೊಂದು
ಶಾಸ್ತ್ರವನ್ನು ಓದಿ ಪೂರೈಸಲು ಸಾಧ್ಯವೆ? ಅದೇ ರಾಮಾಯಣ, ಮಹಾ
ಭಾರತ ಶಾಕುಂತಲ ಮೊದಲಾದ ೪ ೬ ಕಾವ್ಯಗಳನ್ನು ಓದಿದರೆ ಎಲ್ಲ
ಅಂಶಗಳೂ ಅಚ್ಚಳಿಯದೆ ಮನಸ್ಸಿನ ಮೇಲೆ ನಿಲ್ಲುವುವು. ಸಾಹಿತ್ಯದ
ಉದ್ದೇಶವನ್ನು ಹಿಂದಿನವರಾಧರೂ ಹೀಗೆಯೇ ಸಮರ್ಥಿಸಿದ್ದಾರೆ. ಮುಗ್ಧ
ಮತಿಗಳಿಗೆ ಅಂದರೆ, ಶಾಸ್ತ್ರಾಭ್ಯಾಸ ಸಾಧ್ಯವಿಲ್ಲದವರಿಗೆ ಕೃತ್ಯ ಯಾವುದು,
ಅಕೃತ್ಯಯಾವುದು? ಎಂಬುದನ್ನು ಸರಳವಾಗಿ ಸೂಚಿಸುವುದೇ ಸಾಹಿತ್ಯದ
ರಸವಿದ್ಯೆ. ಆಜ್ಞೆಮಾಡದೆ, ಆದರೆ ಆಗಲಿ ಹೋದರೆ ಹೋಗಲಿ ಎಂಬ

ಾಟಿಯಿಂದ ಸಲಹೆಕೊಡದೆ, ಅತ್ಯಂತ ಹಿತವಾದ ಮತ್ತು ಪ್ರಿಯವಾದ ಾಟಿಯಿಂದ ಹೃದಯಕ್ಕೆ ಹೌದು ಹೌದೆನಿಸುವಂತೆ, ಪ್ರಸನ್ನಭಾವದಿಂದ ರೋಗ್ಯವಾದುದನ್ನು ಯೋಗ್ಯವೆಂದು ಒಪ್ಪಿ ಅದನ್ನು ಆಚರಿಸಲು ನಿರ್ಧ ಸುವಂತೆ ಈ ರಸವಾಹಿನಿಯು ಪ್ರಚೋದಿಸುತ್ತದೆ.

ಅನ್ಯರೊಡನೆ ಸಹಾನುಭೂತಿಪಡುವ ಮಾನವತೆಯ ಮೂಲಸೂ ತ್ರವೇ ಸಾಹಿತ್ಯದ ಹೃದಯ. ರಸಾಸ್ವಾದದ ಗುಟ್ಟೇ ಅದು. "ಆತ್ಮವತ್ ರ್ವಭೂತಾನಿ ಯಃಪಶ್ಯತಿ" ಎಂಬ ಪರಮಧರ್ಮ ಸಾರವನ್ನು ಸಾಕ್ಷಾ ತ್ಕರಿಸಿ ಕೊಡುವುದೇ ರಸಮಾರ್ಗ. ಸಾಹಿತ್ಯದಲ್ಲಿ ಸ್ಪಷ್ಟಾಸ್ಪಷ್ಟವಾಗಿ ರೂಪಿಸಿರುವ ಭಾವರಸಗಳೆಲ್ಲ ಮಾನವಹೃದಯವೇ ಇದ್ದು ಅನ್ಯಾನುಭ ವವನ್ನು ರಸಿಕರು ತಮ್ಮದನ್ನಾಗಿ ಮಾಡಿಕೊಂಡು, ಭೌತಿಕಕಾರ್ಯಕ್ಕೆ ಅವಕಾಶಕೊಡದೆ ಇದ್ದರೂ ಕೊಟ್ಟುದರಿಂದ ಆಗಬಹುದಾಗಿದ್ದ ಎಲ್ಲ ಮಾನಸಿಕ ಪರಿವರ್ತನಗಳನ್ನೂ ಸಾಧಿಸಿಕೊಳ್ಳಲಾಗುತ್ತದೆ. ಸ್ವಪ್ನದಲ್ಲಿ ಹುಲಿಯನ್ನು ಕಂಡರೆ ಅಥವಾ ಅದು ಕಚ್ಚಿದರೆ ವಾಸ್ತವಿಕವಾಗಿ ದೇಹಕ್ಕೆ ಯಾವ ಅಪಾಯವೂ ಆಗದಿದ್ದರೂ ಮನಸ್ಸಿನಲ್ಲಿ ಎಚ್ಚತ್ತಮೇಲೂ ಅದರ ಪರಿಣಾಮವಾದ ಭಯಭಾವ ಉಳಿಯುವಂತೆ ಸಾಹಿತ್ಯಾನುಶೀಲನದಿಂದ ಗಮ್ಯವಾಗುವ ಅನುಭವವು ಕಾರ್ಯಪ್ರಪಂಚದಲ್ಲಿ ವಾಸ್ತವಿಕ ಪರಿಣಾಮ ವೇನನ್ನೂ ಹೆಚ್ಚಾಗಿ ಮಾಡದೆ (ಹೆಚ್ಚಾಗಿ ಎಂದದ್ದು ಆನಂದ ಮತ್ತು ದುಃಖಗಳಲ್ಲಿ ಕಣ್ಣೀರು ಬರುವುದು ವಾಸ್ತವ ಅನುಭವವಿರುವುದರಿಂದ), ಹೃದಯ ಪರಿವರ್ತನವನ್ನು ಸಾಧಿಸಿಕೊಳ್ಳಲಾಗುತ್ತದೆ. ಈ ಕಾರಣದಿಂದ ಸಾಮಾನ್ಯಜ್ಞಾನ, ನಾಗರಿಕತೆಯ ಕರ್ತವ್ಯಾಕರ್ತವ್ಯ, ಸಾಮಾಜಿಕ ವಿನಯ ವಿವೇಕಯೋಗ್ಯತಾಯೋಗ್ಯತೆಗಳು, ಇಂಗಿತಜ್ಞತೆ, ಪರಾನುಕಂ ಪಗುಣ, ವ್ಯಕ್ತಿ ಪರಿಚಯ ಮುಂತಾದ ಬುದ್ಧಿಭಾವನೆಗಳಿಗೆ ಸಂಸ್ಕಾರ ಕೊಟ್ಟು, ನಾಗರಿಕವಾದವುಗಳನ್ನಾಗಿ ಮಾಡುವ ಉದ್ದೇಶವು ಸಾಹಿತ್ಯ ಪ್ರಧಾನವಾದ ವಿದ್ಯಾಭ್ಯಾಸದಿಂದ ಸಾಧ್ಯವಾಗುವುದೆಂದು ಧಾರಳವಾಗಿ ಹೇಳಬಹುದು.

ಕಥಾಭಕ್ತರಿಗೆ ಕಡಿಮೆಯಿಲ್ಲವೆಂದು ಹಿಂದೆ ಹೇಳಿದೆ. ಆದರೆ ಕೆಲವು ಮಂದಮತಿಗಳಿಗೆ ಯಾವ ವಾಸ್ತವಿಕ ಇಲ್ಲವೆ ಕಾವ್ಯಾನುಭವವೂ ಮನಃ

ಪರಿವರ್ತನಕ್ಕೆ ಕಾರಣವಾಗದು. ಏಕೆಂದರೆ, ಅವರಿಗೆ ಅರ್ಥವಾಗುವು
ಚಿತ್ತದ ಭಾಷೆಯೊಂದೇ. ಅಂಥ ಹೃದಯ ಮತ್ತು ಬುದ್ಧಿಗಳು ತವ
ನಿಷ್ಕ್ರಿಯೆಯಿಂದ ಕೂಡ ಕ್ರೂರತಮ ಪಾಪವನ್ನು ಆಚರಿಸಲು ಹಿಂ
ಮುಂದೆ ನೋಡತಕ್ಕಂಥವಲ್ಲ. ಅಂಥವಲ್ಲದೆ ಸರಳಹೃದಯಿ, ಕುತೂಹ
ಬುದ್ಧಿಗಳಿಗೆ ಕಥಾದಿಗಳಿಂದ ಪಾತ್ರಪರಿಚಯದ ಮೂಲಕ ನೈತಿಕ ಸ
ಸ್ಕಾರ ಸಿಗಬಲ್ಲುದು. ಆದರೆ ಕೇವಲ ಕಥೆ ಮತ್ತು ನಾಟಕಾದಿಗಳಿಂ
ಮುಗ್ಧತೆ ಹೋಗಬಹುದಾದರೂ ಮಧ್ಯತೆಯಲ್ಲದೆ ಪ್ರೌಢಿಮೆಬರಲಾರದ
ಅದಕ್ಕೆ ಪ್ರಬಂಧ ಮತ್ತು ಕವಿತೆಗಳನ್ನು ಓದಿ ಆನಂದಿಸುವ ಅಭ್ಯಾ
ಆವಶ್ಯಕ. ಸರ್ವ ಕಲೆಗಳಲ್ಲಿ ಸಾಹಿತ್ಯವು ಪ್ರಬುದ್ಧ ಎನಿಸಿದರೆ, ಸಾಹಿತ್ಯ
ಸರ್ವಾಂಶಗಳಲ್ಲಿ ಭಾವಗೀತ ಮಕುಟಮಣಿಯೆನಿಸುವುದು. ಅದ
ರಸಿಕತೆಗೆ ನಿಕಷವೆನಿಸುವುದು. ಹಾಡುಗಳೆಲ್ಲ ಭಾವ ಗೀತಗಳೆನಿ
ಲಾರವು. ಭಾವದ ತೀವ್ರತೆ, ಗಾಂಭೀರ್ಯ, ಸೂಕ್ಷ್ಮತೆ ಮತ್ತು ಶೀಘ್ರ
ಪರಿಣಾಮಿತ್ವಗಳುಳ್ಳ ಮೇಘದೂತದಂಥ ಗ್ರಂಥವೇ ಭಾವಗೀತ.

ಸಾಹಿತ್ಯದಿಂದ ಮೇಲೆ ಹೇಳಿದಂತೆ ಆನಂದ ಮತ್ತು ಹೃದಯ
ಪರಿವರ್ತನೆಗಳು ಸಂಭವಿಸಬೇಕಾದರೆ ಸಾತ್ವಿಕತೆಯ ಅಡಿಗಲ್ಲಾ
ಪ್ರಾಮಾಣಿಕತೆಯ ಅಂಶ ಸಾಮಾಣಿಕತೆಯ ಅಂಶ ಸಾಮಾಜಿಕರ ಹೃದ
ಯದಲ್ಲಿ ಇರಲೇಬೇಕು. 'ಮಾರಿ'ಯಂಥ ಸಂಸ್ಕಾರವುಳ್ಳ 'ಗುಂಡಾ
ಬುದ್ಧಿ'ಯುಳ್ಳವರು ಅದನ್ನೇ ಬೆಳೆಸಿಕೊಳ್ಳುವ ಯೋಗಸಾಧನೆಯಲ್ಲಿದ್ದ
ಮಾತ್ರ ಅವರ ಮೇಲೆ ಸತ್ವೋದ್ರೇಕ ಜನ್ಯವಾದ ಈ ರಸವಿದ್ಯೆಯು
ಯಾವ ಪರಿಣಾಮವನ್ನೂ ಉಂಟುಮಾಡಲಾರದು. ಆದರೆ ಅಂಥವರು
ವಿರಳ. ಅಂಥ ಬುದ್ಧಿಯ ಕೆಲವಂಶ "ಸಾಹಿತ್ಯದಲ್ಲಿದ್ದುದು ಸಾಹಿತ್ಯದಲ್ಲಿ
ಅದೆಲ್ಲ ಇಲ್ಲಿ ಪ್ರಯೋಜನಕ್ಕೆ ಬರುವುವೇ?'' ಎಂದು ಪುರಾಣ ಹೇ
ಬದನೆಯಕಾಯನ್ನು ಕೊಳ್ಳ ಹೋದ ಆಚಾರ್ಯರಂತೆ ತಿಳಿದೂ
ಆಚರಿಸಿದ ಸಾಮಾನ್ಯರಲ್ಲಿ ಎಲ್ಲೆಲ್ಲೂ ಕಾಣಬಹುದು. ಇದು ಸಾಹಿತ್ಯದ
ಉದ್ದೇಶಕ್ಕೆ ಕುಠಾರಪ್ರಾಯವಾದುದು. ಇದು ರಸಿಕತೆಯಲ್ಲ. ರಸಿಕ
ಮನ್ಯತೆ. ಇಂಥವರಿಗೆಂದೂ ನಿಜವಾದ ರಸಾಸ್ವಾದವಾಗಲಾರದು.

ಅವರು ಜೀವನದಲ್ಲಿ ನಿರ್ಘೃಣರೂ, ಕಪಟಿಗಳೂ, ಸ್ವಾರ್ಥಸಾಧಕರೂ ಆಗಿರುವರೆಂದು ಸುಲಭವಾಗಿ ವಿಂಗಡಿಸಿ ಹೇಳಿ ಬಿಡಬಹುದು!

ಮಾನವನ ಸಾಮಾಜಿಕ, ಆರ್ಥಿಕ ಜೀವನದ ಎಲ್ಲ ಕಾರ್ಯಗಳನ್ನೂ ನಡೆಸುವುವು ಅವನ ಹೃದಯ ಮತ್ತು ಬುದ್ಧಿಗಳೇ ಆಗಿರುವುದರಿಂದ ಅವುಗಳನ್ನು ಸಂಸ್ಕರಿಸಿದರೆ, ಸುಧಾರಿಸಿದರೆ ಅವಕ್ಕೆ ಅಧೀನವಾದ ಅವನ ಕಾರ್ಯಗಳಲ್ಲೆಲ್ಲ ಸುಧಾರಣೆ ತಲೆದೋರುವುದು ಸ್ವಾಭಾವಿಕ. ಸುಧಾರಣೆಗಾಗಿಯೇ ಹೋಂಡದೆ, ಗುಪ್ತವಾಗಿ ಸೂಚ್ಯವಾದ ತನ್ನ ಧ್ವನಿಶಕ್ತಿಯಿಂದ (Power of Suggestion) ಸಾಮಾಜಿಕರ ಮನವನ್ನು ತಿದ್ದಬಲ್ಲ ಸಾಹಿತ್ಯವೇ ಉತ್ತಮೋತ್ತಮವೂ ನಿತ್ಯ ನೂತನವೂ ಎನಿಸುವ ರಸದ ಬುಗ್ಗೆ. ಸಾಹಿತ್ಯವೆಂದರೆ ಇಂಥ ಸಾಹಿತ್ಯ. ಇದರ ಪ್ರಾಧಾನ್ಯವನ್ನು ಯಾರೂ ಯಾವ ಕಾಲದಲ್ಲೂ ಅಲ್ಲಗಳೆಯಲಾರರು.

ಸೂಚ್ಯಾರ್ಥವನ್ನು ಗ್ರಹಿಸುವ ಬುದ್ಧಿಯನ್ನು ಕಳೆದುಕೊಂಡ ಸಾಮಾಜಿಕರಿಗೆ ವಾಚ್ಯಸಾಹಿತ್ಯ ಅಥವಾ ಪ್ರಚಾರ ಸಾಹಿತ್ಯ ಅತ್ಯಗತ್ಯ. ಈ 20ನೇಯ ಶತಮಾನದಲ್ಲಿ ನೀತಿ ಅನೀತಿಗಳನ್ನು ಪ್ರಸರಿಸಲು ಇದೇ ಸಾಧನವನ್ನು ಪರಿಣಾಮಿತ್ವದ ದೃಷ್ಟಿಯಿಂದ ಬಳಸಲಾಗುತ್ತಿದೆ. ಇದರ ಕೃತಕತೆಯನ್ನು ಹಾಸ್ಯಾಸ್ಪದವಾಗುವಲ್ಲಿಯ ವರೆಗೆ ಬೆಳೆಸಲಾಗಿದೆ. "ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಬೇಕು" ಎಂದು ಹಿಂದಿನ ಗಾದೆಯಿದ್ದರೆ, "ಸಾವಿರ ಸುಳ್ಳು ಹೇಳಿ ಒಂದು ವಸ್ತುವನ್ನು ಮಾರು" ಎಂಬುದು ಇಂದಿನ ಗಾದೆಯಾಗಿದೆ. ಜಾಹೀರಾತು, ನೋಟೀಸು, ಹಸ್ತಪತ್ರಿಕೆ ಇವುಗಳಿಗೆ ಮರುಳಾಗುವ ಜನರು ಅಮೇರಿಕದಲ್ಲಿ ಒಳ್ಳೆಯ ಪ್ರಾಯಶ್ಚಿತ್ತವನ್ನು ಅನುಭವಿಸಿದರು. ಎಲ್ಲ ವಸ್ತುಗಳೂ ಅತ್ಯುತ್ತಮ ಸರ್ವಸಂಜೀವನಿ ಎಂಬ ಬಗಹದ ಕೆಳಗೇ ಹೊರಬೀಳಲಾರಂಭಿಸಿದ್ದರಿಂದ ನಿಜವಾಗಿ ಯೋಗ್ಯವಾವುದು, ಅಯೋಗ್ಯವಾವುದು? ಎಂಬುದನ್ನು ಅರಿಯಲಾರದೆ, ಹಾಗೆ ತಿಳಿಸಿಹೇಳಲು, ಜನರೇ ಸ್ವಂತ ಖರ್ಚಿನಿಂದ ತಜ್ಞರ ಸಮಿತಿಯೊಂದನ್ನು ನಿಯಮಿಸಬೇಕಾಯಿತಂತೆ! ಅವರು ಪರೀಕ್ಷಿಸಿ ಯುಕ್ತವೆಂದು ಹೇಳಿದ ಬಳಿಕವೇ ಒಂದು ಹೊಸ ಪದಾರ್ಥವನ್ನು ಕೊಳ್ಳಲು ಅಲ್ಲಿಯ ಜನರಿಂದು ಬಯಸುತ್ತಾರೆ. ಇದೊಂದು ಬಗೆ ಇದಲ್ಲದೆ ನ್ಯಾಯ

ವಾಗಿ ಸಾಮಾಜಿಕರನ್ನು ಪ್ರಗತಿಗೆ ಹಚ್ಚಲು ಸದ್ಬೋಧ ಮಾಡಬೇಕಾದ
ಹಿಂದಿನ ಕಾಲದ ನೀತಿಕತೆಗಳ ಸ್ಥಾನವನ್ನು ಇಂದು ಪ್ರಚಾರ ಸಾಹಿ
ಆಕ್ರಮಿಸಿದೆ. ಇದು ಬೆತ್ತದ ಭಾಷೆಗೆ ಸರಿಸಮವಾದುದು. ಸ್ಥೂಲಬು
ಯವರಿಗೆ, ಅರಚಿಹೇಳಬೇಕಾಗುತ್ತದೆ. ಇಲ್ಲಿ ಹೊಡೆವವನಿಗಿಂತ ಹೊಡೆ
ಕೊಳ್ಳುವುದು ಅನಿವಾರ್ಯ ಎನಿಸುವಂತೆ ನಡೆದುಕೊಳ್ಳುವವರ ಅನಾ
ರಿಕತೆಯೇ ಹೆಚ್ಚಿನದು. ಇಂಥ ಪ್ರಚಾರ ಸಾಹಿತ್ಯ ಅಗತ್ಯವೆನಿಸುವಂ
ಬುದ್ಧಿಮಾಂದ್ಯಕ್ಕೆ ಇಳಿದ ಸಾಮಾಜಿಕರೇ ಇಲ್ಲಿ ನಿಂದ್ಯರಲ್ಲದೆ ಅಂ
ಸಾಹಿತ್ಯವಲ್ಲ. ಇದು ಇಂದು ರೋಗಕ್ಕೆ ತಕ್ಕ ಮದ್ದೆನಿಸಿದೆ. ಅಶ
ದಾರಿದ್ರ್ಯ, ವಸನದಾರಿದ್ರ್ಯ, ನಿದ್ರಾದಾರಿದ್ರ್ಯಗಳನ್ನು ನಿವಾರಿಸಲ
ಕುಂಭಕರ್ಣ, ಯೋಗಸ್ಥರಾಗಿರುವ ಜನತೆಯನ್ನು ಎಚ್ಚರಿಸುವ ಸಾಹಿ
ತ್ಯಕ್ಕೇ ಸದ್ಯ: ಪ್ರಾಧಾನ್ಯ ಕೊಡಬೇಕಾಗಿದೆ. ಸದ್ಬುದ್ಧಿಯನ್ನು ದೂ
ತಳ್ಳಿ ಸೋಮಾರಿತನದ ಮುಸುಕನ್ನು ಹೊದೆದು ಕುಳಿತು ಕಣ್ಣಿದ್ದೂ
ಕುರುಡರೆನಿಸುವ ನಮ್ಮಲ್ಲಿಯ ಅನೇಕರನ್ನು ಎಚ್ಚರಿಸಲು ಬಾರುಗೋಲಿನ
ಸಾಹಿತ್ಯವಲ್ಲದೆ ಮತ್ತಾವುದು ಸಮರ್ಥವಾಗಬಲ್ಲುದು?

ಈ ಬಾರುಗೋಲಿಗೆ ಸಾಹಿತ್ಯಕ್ಕಾದರೂ ಒಂದು ಪದ್ಧತಿಯಿದೆ
ಸಿನೆಮ ಕಥೆ ಇಲ್ಲವೆ ನಾಟಕದಂತೆ ಸಂಕ್ಷೇಪ ರಾಮಾಯಣದ ನೀತಿ
ಯಿಂದ ದುರಂತ ಚಿತ್ರವೊಂದನ್ನು ಕಾರ್ಯಕಾರಣ ಸಮನ್ವಯವಿಲ್ಲದೆ
ರಚಿಸಿದರೆ ಉದ್ದೇಶ ಹಾನಿಯಾಗದಿರದು. Made to order ತಯಾರ್
ಸಾಹಿತ್ಯವೆನಿಸುವ ಇದಕ್ಕೆ ತಯಾರಿಸಿದ ಸೂತ್ರಗಳ ಅನುಸರಣ ಅವಶ್ಯಕ.
ಈ ಕ್ರಮ ಪಾಶ್ಚಾತ್ಯರಲ್ಲಿ ಚೆನ್ನಾಗಿ ಅನುಸರಿಸುತ್ತಾರೆ. ನಮ್ಮಲ್ಲಿ ಅ
ಕ್ರಮದಿಂದ ಪ್ರಚಾರವೂ ಅಲ್ಲ ಅಪಪ್ರಚಾರವೂ ಅಲ್ಲ ಎನಿಸುವ ಕಸಸಾಹಿ
ತ್ಯದ ಕಂತೆಗಳ ಪ್ರಕಟನೆಯೇ ಹೆಚ್ಚಾಗಿ ಹೋಗಿರುವುದು ವಿಷಾದಕರ.

'ಅತಿ ಪರಿಚಯದಿಂದ ಅವಜ್ಞೆ,' 'ಅಗ್ಗಕ್ಕೆ ಸಿಕ್ಕಿದ್ದು ಮುಗ್ಗಿದ
ಜೋಳ" ಎಂಬ ವಾಕ್ಯಗಳಲ್ಲಿಯ ನೀತಿಯಂತೆ ಅನಪೇಕ್ಷಿತವಾಗಿ ಪುಸ್ತಕ
ಗಳೂ ಪತ್ರಿಕೆಗಳೂ ಹೊರಡುತ್ತಿರುವುದರಿಂದ ಆದರ್ಶ ವಾಙ್ಮಯದ
ಗೌರವವೂ ಜನತೆಯಲ್ಲಿ ಕೆಳಪಟ್ಟಕ್ಕಿಳಿವಂತಾಯಿತು. ಹಿರಿಯರು
ಹಿಮ್ಮೆಟ್ಟದೆ ಸಾರಾಸಾರ ವಿಚಾರವನ್ನು ಕಂಠೋರ ಪ್ರಭುಸಮಿತಿಯಿಂದ

ೀಳದಿದ್ದುದೇ ಇದಕ್ಕೆ ಕಾರಣ. ಉದಾಸೀನಪರರಾದ ಜನರಿಗೆ
ದೊಂದು ನೆಪವಾಯಿತು. ಸಾಹಿತ್ಯವನ್ನು ಕಡೆಗಣಿಸಿ ಮಾತನಾಡಲು
ಶ್ರಪಯುತಿ ಸಿತರಾಂ ಸಾಹಿ ಸಾಹಿತ್ಯಕಂಥಾ" ಎಂದು ಬಲ್ಲವರೂ ಹೇಳು
ಂತಾಯಿತು. ಈ ದುರ್ವಿಪಾಕದ ಯುಗದಲ್ಲಿ ಬದುಕುವ ದುರ್ಭಾಗ್ಯ
ನ್ನು ಪಡೆದ ಲೇಖಕ ಇಲ್ಲವೆ ರಸಿಕನು ಹತಾಶನಾಗದೆ ಗತ್ಯಂತರವಿಲ್ಲ.

ಅಜ್ಞರೆಲ್ಲ ಸೇರಿ ಸುಜ್ಞನ ಆಯ್ಕೆಗೆ ಹೊರಟಂತೆ ಅರಸಿಕರೆಲ್ಲರೂ
ಂದು ಲೇಖಕರ ರಸಶಕ್ತಿಯನ್ನು ನಿರ್ಣಯಿಸುವ ವಿಮರ್ಶಾಸಾಹಿತ್ಯ
ನ್ನು ಹೊರಗೆಡಹುತ್ತಿರುವುದೂ ಸಾಹಿತ್ಯದ ಪ್ರಾಧಾನ್ಯವನ್ನು ಅಧೋ
ಮುಖಮಾಡಲು ಕಾರಣವಾಗಿದೆ. ರೋಗಿಯನ್ನು ಪರೀಕ್ಷಿಸಲು ವೈದ್ಯನೇ
ೇಕೆಂಬುದು ಗೊತ್ತಿದ್ದರೂ ಸಾಹಿತ್ಯವನ್ನು ಸವಿಾಕ್ಷಿಸಲು ರಸಜ್ಞರೇ
ವಶ್ಯಕ ಎಂಬುದನ್ನು ಮಹಾಜನರು ಮರೆತಂತಿದೆ. ಇದೇ ಇಂದಿನ
ಡೆಮಾಕ್ರಸಿ". ಹುರಿಯಾಳುಗಳ ಕಾರ್ಯಶಕ್ತಿಯ ವೈಶಿಷ್ಟ್ಯವನ್ನು ಅಳೆ
ುಲಾರದ ಮತದಾರರು ಗಾಳಿಯಲ್ಲಿ ಗುಂಡು ಹಾರಿಸಿದಂತೆ ತಮಗೆ
"ಅನಿಸಿ"ದವರಿಗೆ ಮತಕೊಟ್ಟು ಬರುವಂತೆ ವಿಮರ್ಶಕಂಮನ್ಯರೂ
ಮಗೆ "ಅನಿಸಿ"ದ್ದನ್ನು ಅರಸುದನಿಯಿಂದ ಪ್ರಕಟಿಸಿ ಜಾಹೀರಾತಿನ
ತಿಗೆ ವಿಮರ್ಶೆಯನ್ನು ಒಯ್ದು ಮುಟ್ಟಿಸಿರುವುದು ಸಾಹಿತ್ಯದ ಬಗ್ಗೆ
ನ್ಮೂಲಕ ಸಾಹಿತಿಗಳ ಬಗ್ಗೆ ಜನರು ತಾತ್ಸಾರ ಮಾಡುವಂತೆ ಮಾಡಿದೆ.
ಲಿತವರೆನಿಸಿಕೊಂಡ ವಿವಿಧೋದ್ಯೋಗಿಗಳು ತಮಾಷೆ ನೋಡುವಂತೆ
ಾಹಿತ್ಯದ ವಾಚನ ಅಭಿನಯಾದಿಗಳನ್ನು ನೋಡ ಬರುವುದೇ ಇದಕ್ಕೆ
ಾಕ್ಷಿ. ಸಾಹಿತ್ಯವನ್ನು ಕೇವಲ ಕ್ರೀಡಾವಸ್ತುವೆಂದು ಕಾಣುವಂತಾ
ುದೂ ಸಿನೆಮತಾರೆಯರಂತೆ ಅಲಂಕಾರ ಕರಂಡಕಗಳೆನಿಸಿದ ಕೆಲ ಆಧು
ಕ ವಿದ್ಯಾವತಿಯರನ್ನು ಕೇವಲ ಭೋಗವಸ್ತುಗಳೆಂದು ಜನರು ತಿಳಿ
ಂತಾದುದೂ ಸಾಹಿತ್ಯ ಮತ್ತು ವಿದ್ಯೆಗಳ ಅಧೋಗತಿಯನ್ನು ಸೂಚಿಸು
ತ್ತದೆ. ಇಂಥ ದುಃಸ್ಥಿಗೆ ಉಳಿದ ದುಃಸ್ಥಿತಿಗಳಿಗೆ ಹೇಗೋ ಹಾಗೇ ಬರಹ
ಾರ ಓದುಗರಿಬ್ಬರೂ ಸರಿಯಾಗಿ ಪಾಲುಗಾರರು, ಗಂಡಹೆಂಡಿರ ಜಗಳ
ಲ್ಲಿ ಹಿಂಸೆಯ ರೂಪ ಬೇರಾದರೂ ಪ್ರಮಾಣ ಪರಸ್ಪರ ಒಂದೇ ಇರು
ವುದೇ ಸಾಮಾನ್ಯವಾಗಿ ಕಂಡುಬರುವಂತೆ ಇಲ್ಲಿಯೂ ಸಾಹಿತಿ ಮತ್ತು

ಸಾಹಿತ್ಯಾಭ್ಯಾಸಿಗಳು ಪರಸ್ಪರರ ಸಾಂಸ್ಕೃತಿಕ ಅಧಃಪತನಕ್ಕೆ ಸ್ಥೂಲವಾ
ಸಮಭಾಗಿಗಳೆಂದೇ ಹೇಳಬೇಕಾಗಿದೆ.

ಸಾಹಿತ್ಯದ ಪುನರುತ್ಥಾನವಾಗಬೇಕಾದರೆ ಅದರ ಪ್ರಾಧಾನ್ಯವನ್ನು
ನಾಗರಿಕರಲ್ಲಿ ಬಿಂಬಿಸಬೇಕಾಗಿದೆ. ಇದಕ್ಕೆ ಆಲಸ್ಯವನ್ನು ಗೆದ್ದ ಸಾಹಿತ್ಯಾ
ಭ್ಯಾಸಿಗಳು ಪ್ರಾಮಾಣಿಕ ಪ್ರಯತ್ನವನ್ನು ಮಾಡಲು ಒಕ್ಕಟ್ಟಾಗುವುದ
ಆವಶ್ಯಕ. ಇಲ್ಲದಿದ್ದರೆ ಸರಸ್ವತಿಯನ್ನು ಕೊಟ್ಟಿಗೆಯಲ್ಲಿ ಕಟ್ಟಿ ಬಾರ
ಗೋಲಿನಿಂದ ಹೊಡೆಯುವುದನ್ನು ನಿತ್ಯವೂ ಕಾಣುವ ಪ್ರಸಂಗ ಉ
ಯುತ್ತದೆ.

“ಸಿರ್ವಾನ್ ಪುಚ್ಛವತೋ ಹಯಾ ಇತಿ ವದಂತ್ಯತ್ರಾಧಿಕಾರೆ
ಸ್ಥಿತಾಃ” ಎಂಬಂತೆ, ಬಂಗಾರ ಇದ್ದಲುಗಳನ್ನು ಒಟ್ಟಿಗೆ ತೂಗಿ ಎಸೆಯುವ
ಪ್ರವೃತ್ತಿಯನ್ನು ಸಾಮಾನ್ಯ ಓದುಗರ ಮನದಿಂದ ಹೊಡೆದೋಡಿಸಲು
ಇಂಥ ಸರ್ವಸಿದ್ಧವಾದ ಸಹಕೃತವಾದ ಪ್ರಯತ್ನವನ್ನು ಪಾರಂಭಿಸಬೇಕು

ಮನುಷ್ಯನೆಂದರೆ ಮನಸ್ಸು. ಮನಸ್ಸನ್ನು ಪಳಗಿಸಲು ಮನಸ್ಸನ್ನು
ಬಳಸಿಕೊಂಡು ಹುಟ್ಟಿದ, “ಮನಸಿಜ” ಎನಿಸುವ ಸಾಹಿತ್ಯವೇ ಆವಶ್ಯಕ
ವಲ್ಲವೆ? ಮನಸ್ಸನ್ನು ಮಥಿಸುವ “ಮನ್ಮಥ”ನೆನಿಸುವ ಸಾಹಿತ್ಯವೇ ಅಗ
ತ್ಯವೆನಿಸದೆ? ಮನ್ಮಥಕಾಂತೆಯಾದ ರತಿಯ ಕಾಂತಾಸಂಮಿತಿಯ
ಪ್ರಾಧಾನ್ಯವನ್ನು ಅನಾದಿಕಾಲದಿಂದ ಇಂದಿನ ವರೆಗೂ ಕಾಣಬಹುದಾಗಿದೆ.
ಭೋಗರತಿ, ಯೋಗರತಿ—ಯಾವುದಕ್ಕಾದರೂ ಸಾಹಿತ್ಯವೇ ಗತಿ. ಸುಶಿ
ಕ್ಷಿತ ಸಮಾಜವನ್ನು ನಿರ್ಮಿಸಲು ಸುಶಿಕ್ಷಿತರನ್ನು ತಯಾರಿಸಬೇಕು.
ಹಾಗೆ ಸುಶಿಕ್ಷಣ ಕೊಡಲು ಉತ್ತಮ ಸಾಹಿತ್ಯವೊಂದೇ ಸಮರ್ಥವೆಂಬ
ದನ್ನು ಪ್ರಯೋಗ ವಿಜ್ಞಾನಿಗಳು ಮನಗಾಣದಿರರು.

ಕಥೆ, ಕಾದಂಬರಿ, ನಾಟಕ, ಪದ್ಯಾದಿಗಳಲ್ಲಿ ಕಲ್ಪಿತ ಇಲ್ಲವೆ ಕಲ್ಪ
ನೀಯ ಪಾತ್ರಗಳೂ ಸನ್ನಿವೇಶಗಳೂ ಜೀವನದಲ್ಲಿರುವಂತೆಯೇ ಸ್ವಲ್ಪ
ಹೆಚ್ಚು ಕಡಿಮೆಯಿಂದ ಚಿತ್ರಿಸಲ್ಪಟ್ಟಿರುತ್ತವೆ. ಯಾವ ಅಂಶವನ್ನು ರಸಿಕರ
ಮನದ ಮೇಲೆ ಹೆಚ್ಚಾಗಿ ಬಿಂಬಿಸಬೇಕೆಂದು ಕವಿಗನಿಸುವುದೋ ಅದನ್ನು
ಅಲ್ಲಿ ಸ್ವಲ್ಪ ಅತಿಶಯವನ್ನು ಬೆರಸಿ ಹೇಳಿರುತ್ತಾನೆ; ಅರ್ಥ ಸ್ಪಷ್ಟತೆಗಾಗಿ
ಉಪಮಾದಿ ನಿದರ್ಶನಗಳನ್ನು ಕೊಟ್ಟಿರುತ್ತಾನೆ. ಈ ಎಲ್ಲ ಸಾಧನಗಳಿಂದ

ರಸಿಕರು ಆಯಾ ಪಾತ್ರಗಳ ಅಂತರಂಗವನ್ನು ಹೊಕ್ಕು ತಂತಮ್ಮ ಸದ ಸತ್ ಪ್ರವೃತ್ತಿಗಳಿಗನುಗುಣವಾಗಿ, ತಂತಮ್ಮ ಅನುಭವದ ಹಿನ್ನೆಲೆಯಲ್ಲಿ ಅವುಗಳ ನಡೆ, ನುಡಿ, ಹಾವ, ಭಾವ, ಚಟುವಟಿಕೆಗಳಲ್ಲಿ ಯುಕ್ತಾಯು ಕ್ತತೆಯನ್ನು ತಮ್ಮ ಅಂತಃಕರಣದ ಪ್ರೇರಣೆಯಂತೆ ತಾತ್ಕಾಲಿಕವಾಗಿ ನಿರ್ಣಯಿಸಿ, ಕೆಲವನ್ನು ಮೆಚ್ಚಿಕೊಂಡು, ಅವುಗಳಲ್ಲಿ ಸಮಾವೇಶ ಹೊಂದಿ ತಲ್ಲೀನರಾಗುತ್ತಾರೆ. ಈ ತಲ್ಲೀನತೆಯಿಂದ ಕಥೆಯಲ್ಲಿಯ ಪ್ರಧಾನ ಪಾತ್ರಗಳ ದೃಷ್ಟಿಯಿಂದ ಉಳಿದ ಪಾತ್ರಗಳನ್ನು ನೋಡಿ, ತಂತಮ್ಮ ತ್ಯಾಜ್ಯ ಮತ್ತು ಗ್ರಾಹ್ಯ ವಿಮರ್ಶನ ಬುದ್ಧಿಯಿಂದ ಕಾರ್ಯಾಕಾರ್ಯ ವಿವೇಚನೆ ಮಾಡುತ್ತಾರೆ; ಈ ವಿವೇಚನಾನುಸಾರವಾಗಿ ಆಗಿಂದಾಗ ತಮ್ಮ ನೆಚ್ಚಿನ ಮತ್ತು ಮೆಚ್ಚಿನ ಪಾತ್ರಗಳ ತಪ್ಪಿಗೆ ಮರುಗುವ, ದುಃಖಕ್ಕೆ ಕರಗುವ ಭಾವವನ್ನೂ ಆಗದ ಪಾತ್ರಗಳ ಆಯಾ ಸ್ಥಿತಿಗಳಿಗೆ ಕೆರಳುವ, ಹಾಗೇ ಆಗಬೇಕೆಂದು ತೃಪ್ತಿ ಹೊಂದುವ ಭಾವವನ್ನೂ ರಸಿಕರು ತಾಳು ತ್ತಾರೆ. ಮುಖ್ಯ ಪಾತ್ರದೊಡನೆ ಉಂಟಾಗುವ ಸಹಾನುಭೂತಿಯೇ ರಸಾಸ್ವಾದದ ಮೂಲ. ಈ ಸಹಾನುಭೂತಿಯು ತನ್ನದು ಅವನದು (ಅವಳದು) ಎಂಬ ಭೇದಬುದ್ಧಿಯನ್ನು ದಾಟಿ ಮೇಲಿನ ಮಟ್ಟಕ್ಕೆ ಹೋದ ನಿಮಿಷದಲ್ಲಿ ರಸ ಅಥವಾ ಕಾವ್ಯಾನಂದ ಉಂಟಾಗುವುದು. ಈ ಅನುಭವವು ಹೃದಯವನ್ನು ಮಥಿಸಿ, ಕಲಕಿ ಉತ್ತಮಿಕೆಯ ಕಡೆಗೆ ಒಲ ವನ್ನೂ ಅಧಮತೆಯ ಕಡೆಗೆ ಜಿಗುಪ್ಸೆಯನ್ನೂ ಹುಟ್ಟಿಸುವುದೇ ಕಾವ್ಯದಿಂ ದಾಗುವ ನೈತಿಕ ಮತ್ತು ಸಾಂಸ್ಕೃತಿಕ ಪ್ರಯೋಜನ. ರಾಮನಂತೆ, ಸೀತೆಯಂತೆ ಇದ್ದರೆ ಇರಬೇಕು; ರಾವಣನಂತೆ ಶೂರ್ಪಣಖೆಯಂತೆ ಇರ ಕೂಡದು ಎಂದು ಯಾವ ಕಾವ್ಯ ಅಥವಾ ಸಾಹಿತ್ಯವನ್ನು ಅವಲೋಕಿಸಿ ದರೆ ನಮ್ಮಲ್ಲಿ ಪ್ರವೃತ್ತಿಯುಂಟಾಗುವುದೋ ಅದೇ ಉತ್ತಮ ಸಾಹಿತ್ಯ. ಪಾತ್ರಗಳನ್ನೂ ಸನ್ನಿವೇಶಗಳನ್ನೂ ಸ್ಪಷ್ಟವಾಗಿ ಹೇಳದಿರುವ ಕವನ ಮುಂತಾದವುಗಳಲ್ಲಿ ಭಾವಗ್ರಹಣಮಾಡಲು ರಸಿಕರು ತಮ್ಮ ಕಲ್ಪನೆ ಯನ್ನು ಬಹಳ ದುಡಿಸಬೇಕು. ಇಲ್ಲದಿದ್ದರೆ ಕವಿಯ ಉದ್ದೇಶವೇ ಅರ್ಥ ವಾಗುವುದಿಲ್ಲ; ಅವನು ಹೇಳಿದ ಭಾವವೇ ಗಮ್ಯವಾಗುವುದಿಲ್ಲ, ರಸವೇ ಹುಟ್ಟುವುದಿಲ್ಲ. ಆದೊಂದು ಕಟ್ಟಿಲ್ಲದ ಭಾವಚಿತ್ರ; ಕಟ್ಟನ್ನು ಶ್ರಾವಕರೇ

ಕಲ್ಪಿಸಿಕೊಳ್ಳಬೇಕು. ಇದು ಸಾಮಾನ್ಯರಿಗೆ ಕಷ್ಟವೆನಿಸುತ್ತದೆ ಕೆಲವೆಡೆ
ಆದರೆ ಒಮ್ಮೆ ಈ ಗುಟ್ಟು ತಿಳಿದರೆ ಅದರಿಂದ ಆಗುವ ಸೂಕ್ಷ್ಮ ಮತ್ತು
ಶೀಘ್ರ ಪರಿಣಾಮ ಮತ್ತಾವುದರಿಂದಲೂ ಆಗದು.

ಚರಿತ್ರೆಯನ್ನು ಕಥೆಯೆಂದು ತಿಳಿದರೆ ಅಲ್ಲಿ ಬರುವ ಸ್ತ್ರೀ ಪುರುಷ
ಪಾತ್ರಗಳಲ್ಲಾದರೂ ಓದುಗರಿಗೆ ಮೇಲಿನಂತೆಯೇ ಮೆಚ್ಚಿಕೆಗೆ ಬರುವ
ಮತ್ತು ಬಾರದ ವರ್ಗಗಳು ಒಮ್ಮಿಂದೊಮ್ಮೆ ಹೊಳೆದು ಬಿಡುತ್ತವೆ.
ರುಕ್ಮಿಣಿ ಸತ್ಯಭಾಮೆಯರಲ್ಲಿಯ ತಾರತಮ್ಯ, ಕೃಷ್ಣ ರಾಮರಲ್ಲಿಯ ಗುಣ
ಭೇದ, ಪ್ರತಾಪಸಿಂಹ ಶಿವಾಜಿಗಳಲ್ಲಿರುವ ಶೌರ್ಯಭೇದ, ಗಾಂಧಿ ತಿಲಕ
ರಲ್ಲಿರುವ ದೃಷ್ಟಿ ವೈಷಮ್ಯ, ಕ್ಯಾ. ಲಕ್ಷ್ಮಿ ಮತ್ತು ಸರೋಜಿನಿ ನಾಯಿಡು
ಅವರಲ್ಲಿಯ ಪ್ರವೃತ್ತಿ ಮತ್ತು ವೃತ್ತಿಗಳ ತಾರತಮ್ಯ ಇತ್ಯಾದಿಗಳನ್ನು
ರಸಿಕರು ಗ್ರಹಿಸಿ ಅವರಲ್ಲಿ ತಂತಮಗೆ ಅಚ್ಚುಮೆಚ್ಚಿನವರಾರೆಂದು ನಿವಿ
ಷಾರ್ಧದಲ್ಲಿ ಆರಿಸಿಕೊಂಡು ಬಿಡುವರು; ಅವರ ಚರಿತವೇ ಆದರ್ಶವೆಂದ
ತಿಳಿಯುವರು. ಇನ್ನೂ ಮುಂದೆ ಹೋದ ಬೌದ್ಧಿಕ ವಿಮರ್ಶಕರು
ರಾವಣ ರಾಮರ, ಕೌರವ ಧರ್ಮರಾಯರ, ಗಾಂಧಿ ಜಿನ್ನಾರ, ಸೀತೆ
ಶೂರ್ಪಣಖಿಯರ, ವಾಲಿ ಸುಗ್ರೀವರ, ದೇವಕಿ ಪೂತನೆಯರ, ಕಮಲಾ
ದೇವಿ ಮತ್ತು ಕಮಲಾ ನೆಹರುಗಳ, ಮೇಡಂ ಕ್ಯೂರಿ ಮತ್ತು ಲೇಡಿ
ಪೌಂಟ್‌ಬ್ಯಾಟನ್ನರ ಕೃತ್ಯಾಕೃತ್ಯಗಳನ್ನು ತಮ್ಮ ನ್ಯಾಯದ ತಕ್ಕಡಿ
ಯಲ್ಲಿ ಹಾಕಿ ತೂಗಿ, ಅವರವರು ಆಯಾ ಸಂದರ್ಭಗಳಲ್ಲಿ ಮಾಡಿದುದರ
ಯುಕ್ತಾಯುಕ್ತತೆಯನ್ನು ಅಳೆದು, ಅವರವರ ವೈಯಕ್ತಿಕ ಮತ್ತು
ದೇಶಕ್ಕೆ ಸಂಬಂಧಿಸಿದ ನಡೆನುಡಿಗಳ ಪಾವಿತ್ರ್ಯ ಅಪಾವಿತ್ರ್ಯ, ಬುದ್ಧಿ
ಮತ್ತೆ ಬುದ್ಧಿಹೀನತೆ, ಧೀರತೆ ಅಧೀರತೆ, ಅಸಹಾಯತೆ, ಅಸಹಾಯ
ಶೂರತೆ, ಸ್ವಪ್ರಕಾಶತೆ ಪರಪ್ರಕಾಶತೆ, ವ್ಯಕ್ತಿತ್ವಪ್ರಭೆ, ವ್ಯಕ್ತಿತ್ವಹೀನತೆ
ಇವುಗಳನ್ನು ತಿಳಿದು ತಮ್ಮ ಆದರ್ಶಗಳನ್ನು ರೂಪಿಸಿಕೊಳ್ಳುತ್ತಾರೆ. ಮನ
ಶಾಸ್ತ್ರಿಗಳಾದರಂತೂ ಹೇಳುವುದೇ ಬೇಡ. ಭೋಗ್ಯತೆಯೊಂದೇ ಯೋಗ್ಯ
ತೆಯೆಂದು ತಿಳಿದ ಸೀತೆಯ ಅಬಲತೆಯನ್ನೂ, ಭೋಗ್ಯತೆಯ ಜೊತೆಗೆ
ಭೋಗ ಕರ್ತೃತ್ವದಿಂದ ವ್ಯಕ್ತಿತ್ವಪಡೆದ ದ್ರೌಪದಿಯನ್ನೂ ಇವರು ತೂಗಿ
ನೋಡದಿರರು. ಹೀಗೆ ಸಾಹಿತ್ಯವು ಹೃದಯಕ್ಕೂ ಬುದ್ಧಿಗೂ ಜೀವನ

ತ್ರಗಳನ್ನೇ ಎದುರಿಗಿಟ್ಟು, "ಸುಖದುಃಖ ಸಂಗಮವಾದ ಹೃದ್ರಂಗವು
ಿವನವೆಂಬೆನು ಯಾವಾಗಲೂ" ಎಂಬ ಸತ್ಯವನ್ನು ಸಾಕ್ಷಾತ್ಕರಿಸಿ
ೂಡುತ್ತದೆ.

ಇಂಥ ಅಮೂಲ್ಯವೆನಿಸುವ ಸಾಹಿತ್ಯವಿದ್ಯೆಯ ಪ್ರಾಧಾನ್ಯವನ್ನು
ತ್ತಿ ಆಡುವ ಸಂದರ್ಭವೊದಗಿರುವುದು ವಿಷಾದಕರ. ಜನತೆ ಸಾಹಿತ್ಯ
ನ್ನು ಅನಾದರ ಮಾಡಿದುದರಿಂದ ಉತ್ತಮ ಆದರ್ಶಗಳಲ್ಲಿ ಕೆಲವೆನಿಸುವ
ಕ್ಕಟ್ಟು, ಪರಹಿತಬುದ್ಧಿ, ಅನಸೂಯೆ, ಸಹಿಷ್ಣುತೆ, ಕರ್ತವ್ಯದೃಷ್ಟಿ,
ುಪಾಯಚಿಂತನ, ಪ್ರಾಮಾಣಿಕತೆ, ದೇಶಹಿತೇಚ್ಛೆ, ಕಾರ್ಯತತ್ಪರತೆ,
ೂಣೆಗಾರಿಕೆ ಮುಂತಾದ ಹೃದಯಸಂಸ್ಕಾರಗಳನ್ನು ದೃಢಪಡಿಸಿ
ೂಳ್ಳಲಾರದೆ, ಇಂದು ಅನ್ನೋತ್ಪಾದನ, ಅರ್ಥೋಪಾರ್ಜನ, ಆತ್ಮ
ಕ್ಷಣ, ದೇಶರಕ್ಷಣ, ಉದ್ಯಮಸಾಹಸ, ಜ್ಞಾನಾರ್ಜನ, ಕಾರ್ಯಸಾಧ
ತೆ ನಿಃಸ್ವಾರ್ಥತೆ ಇವಾವನ್ನೂ ಸಾಧಿಸಿಕೊಳ್ಳಲಾರದೆ ಸರ್ವಾಂಗ ದಾರಿ
ದ್ರ್ಯದಲ್ಲಿ ಮುಳುಗಿ ತೊಳಲಾಡುತ್ತಿದೆ. ಕ್ಷುದ್ರತೆ, ಅಸೂಯೆ, ಸ್ವಾರ್ಥ,
ಅಪ್ರಾಮಾಣಿಕತೆ ಮತ್ತು ಹೇಡಿತನಗಳಿಂದ ಯಾವುದನ್ನೂ ಸಾಧಿಸ
ಲಾಗದೆ ಅಳುಬುರಕ ಬಾಳನ್ನು ನೂಕುತ್ತಿದೆ. ಈಗಲಾದರೂ ಸಾಹಿತ್ಯ
ದತ್ತ ಜನತೆ ತಿರುಗಿದರೆ ಈ ಸರ್ವರೋಗಗಳು ಪರಿಹಾರವಾದಾವು!



34 ಲೋಪಾಮುದ್ರೆ (ರಂಗನಾಥ) 1

35 ಚಿಗುರು (ಕತೆಗಳ ಸಂಗ್ರಹ) 0 1

36 ನನ್ನ ಕಥೆಗಳು (ಕೆ. ವಿ. ಆಚಾರ್ಯ) 0 1

37 ನಕ್ಕರೂ ನಗಬಹುದು (ಕೆ. ದೇವಕಿ) 0 1

## * ಅಂತರಂಗದ ಪ್ರಕಟಣೆಗಳು *

1 ೧೯೪೯ರ ಬಿರುವಾನಳಿ (ಪತ್ರಗಳು) ಎಂ. ವಿ. ಹೆಗ್ಡೆ 0

2 ಆ ಸುದ್ದಿ (ಕತೆ) ,, 0

3 ಹೈದರಾಬಾದ್, ವಿಜಯ (ಯಕ್ಷಗಾನ ನಾಟಕ) ,, 0

4&5 ಸೆರೆಯಾಳು (ನೀಳ್ಗತೆ) ಕುಲಕರ್ಣಿ ಬಿಂದು ಮಾಧವ 0 7

6 ಗಾದೆಯ ಗಾಂಧಿ (ಸೂಕ್ಷ್ಮ ಪರಿಚಯ) ಎಂ. ವಿ. ಹೆಗ್ಡೆ 0 3

7 ಶಾಂತಿಯ ಮಡಿಲಲ್ಲಿ (ನೀಳ್ಗತೆ) ಪ. ಸು. ಭಟ್ಟ 0 4

8 ಬಲಿ ಪೀಠದಲ್ಲಿ (ನಾಟಕ) ಆರ್. ಕಲ್ಯಾಣಮ್ಮ 0 5

9 ಅಗಲಿದ ಅಕ್ಕ ಸರೋಜಿನಿ (ಜೀವನ) ಎಂ. ವಿ. ಹೆಗ್ಡೆ 0 3

10 ನನ್ನ ಹೆಂಡತಿ (ಕತೆಗಳು) ಮೂಳಕೋಡ ನಾರಾಯಣ ಹೆಗ್ಡೆ 0 4

11 ಪುಣ್ಯ ಫಲ (ನೀಳ್ಗತೆ) ಗಿರಿಬಾಲೆ 0 4

12 ಸುಖದ ದಾರಿ (ವೈರಾಗ್ಯ ಶತಕ) ಕೆ. ಎ. ದೇವದಾಸ 0 3

13 ಸುಕಾಂತ (ಕತೆ) ವಿ. ಜ. ಹಿತ್ತಲಮನಿ 0 4

14 ಪಂಚಮುಖಿ (ಪ್ರಬಂಧಗಳು) ಬಿ. ಎಚ್. ಶ್ರೀಧರ 0 5

15 ಜಾತೀ ಭೂತಕ್ಕೆ ಬಲಿ (ಕತೆ) ಕೆ. ದೇವಕಿ 0 4

16 ಜನಸೇವೆಯ ಸೋಗಿನಲ್ಲಿ (ಕತೆ) ಕೆ. ಶಿವರಾಂ ಶೆಟ್ಟಿ 0 4

17 ನಾ ಕಂಡ ಅವಳು (ಕತೆ) ಶ್ರೀ. ವೆಂ. ಆಡಿಗ, ಶ್ರೀಪತಿ 0 5

18 ತ್ರಿವೇಣಿ (ಪ್ರಬಂಧ) ವಿವಿಧ ಲೇಖಕರು 0 3

19 ನಿಲುವಂಗಿ (ಕತೆ) ಎಸ್. ಸುಬ್ಬರಾಮಯ್ಯ, ಬಿ. ಎ. ಆನರ್ಸ್ 0 4

20 ಬಾಡಿಗೆ ಮನೆ ಮತ್ತು ಮುಸುಕು (ನಾಟಕಗಳು) 0 3

21 ವರ್ತಮಾನ ಕಾಲದ ನಾಲ್ವರು ಮಹಾನುಭಾವರು (ಕು. ಶಿ.) 0 4

22 ದೇವರ ನಾಮ ಮತ್ತು ಅದರ ಸಾಧನೆ (ಬಾಪಟ ವಿನಾಯಕ ಶರ್ಮ) 0 3

23 ಎರಡು ಕತೆಗಳು (ಸಂಕಲನ) 0 3

24 ಸರಸ-ವಿರಸ (ವಿನೋದ ಚಿತ್ರಗಳು) ಅ. ಗೌ. ಕಿನ್ನಿಗೋಳಿ 0 4

25 ಹೃದಯೇಶ್ವರಿ (ಕತೆ) ಪ್ರೇಮಚಂದ್ರ 0 5

26-27 ವಿವಿಧ ವಿಷಯ ಕೋಶ ೧, ೨ ಟಿ. ಚಂದ್ರರಾಜ ಶೆಟ್ಟಿ 0 6

28-30 ನುಡಿ ಮುತ್ತುಗಳು ೧, ೨, ೩ ಎಂ. ವಿ. ಹೆಗ್ಡೆ 0 9

31-34 ಕುಲವಿಲ್ಲದ ಹೆಣ್ಣು (ಕಾದಂಬರಿ) ಪಿ. ವೆಂಕೋಬಾಚಾರ್ಯ 1 8

35 ತವರುಮನೆಯಿಂದ (ಪತ್ರಗಳು) ಸೌ। ಶಾರದಾ ದೇವಿ 0 4

36-38 ಭಾಗ್ಯ ಲಕ್ಷ್ಮಿ (ನಾಟಕ) ಬೆಳ್ತಂಗಡಿ ಲಕ್ಷ್ಮಣ ರಾವ್ 1 4

39 ಯುಗವಾಣಿ (ಕವನಗಳು) ಕು. ಶಿ. ಹರಿದಾಸ ಭಟ್ 0 8

40-41 ಸ್ತ್ರೀ ಹೃದಯ (ಕತೆ) ವಸಂತಿ ಬಾಯಿ ಪಡುಕೋಣೆ 0 4

42 ದ್ವೇಷ (ಕತೆ) ಶ್ರೀನಿವಾಸ ಮೂರ್ತಿ ಗೊರೂರು 0 4

43 ಎರಡು ಏಕಾಂಕ ನಾಟಕಗಳು ಎಸ್. ವೆಂಕಟರಾಜ 0 4

44 ಪ್ರಜಾಪ್ರಭುತ್ವವನ್ನು ಕುರಿತು ಶಿವರಾಮ ಕಾರಂತ 0 8

45 ಕಲಾವಿದನ ದಿನಚರಿ (ಜೀವನ ವಿಮರ್ಶೆ) ಎಸ್. ... 0

| | | | | |
|---|---|---|---|---|
| 46 | ಆಧುನಿಕ ಭಾರತ (ಪ್ರಹಸನಗಳು) | ಹುರುಳಿ ಭೀಮ ರಾವ್ | 0 | 4 |
| 47 | ಕಾಲವೇ ಬದಲಾಗಿದೆ (ಕತೆ) | ಕು. ಶಿ. ಹರಿದಾಸ ಭಟ್ | 0 | 4 |
| 48 | ಭಾರತದ ಸಾಹಿತ್ಯ ಮತ್ತು ಕಲೆಗಳು | ವಿಘ್ನೇಶ್ವರ ಶರ್ಮ | 0 | 4 |
| 49 | ಸ್ತ್ರೀ ಸ್ವಾತಂತ್ರ್ಯ ಬೇಕೆ? (ಪ್ರಬಂಧ) | ವೈದ್ಯ ವಿನಾಯಕ ರಾವ್ | 0 | 5 |
| 50 | ಹಂಬಲ (ಕತೆ) | ಕೃಷ್ಣಮೂರ್ತಿ ಕಿತ್ತೂರ | 0 | 4 |
| 51 | ಭಾರತ ಚಿತ್ರದ ಅಂಚೆ ಚೀಟುಗಳು | ಟಿ ಚಂದ್ರರಾಜ ಶೆಟ್ಟಿ | 0 | 3 |
| 52 | ಅಂತರಂಗದ ಕತೆಗಳು (ಕಥಾಸಂಕಲನ) | | 1 | 4 |
| 53 | ತ್ರಿಶೂಲ (ನಾಟಕಗಳು) | ಮಸುದೇವ ಭೂಪಾಲಂ | 0 | 5 |
| 54 | ಪ್ರೇಮ ಪ್ರವಾಹ (ಕಥಾಸಂಗ್ರಹ) | | 0 | 8 |
| 55 | ಪುಸ್ತಕ ಪುರಾಣ | ಕು. ಶಿ. ಹರಿದಾಸ ಭಟ್ | 0 | 4 |
| 56 | ಹಳ್ಳಿಯಲ್ಲಿ ನಡೆದ ನಾಟಕ | ಕೆ. ಎ. ದೇವದಾಸ | 0 | 3 |
| 57 | ನೆರೆಯ ಗಾಂಧಾರ (ಪರಿಚಯ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 3 |
| 58 | ಮಾತಿನ ಯುಗದ ಮಹಾಪ್ರಭಾವ | ವಿಘ್ನೇಶ್ವರ ಶರ್ಮ | 0 | 3 |
| 59 | ವಿಜ್ಞಾನದ ಬೆಳವಣಿಗೆ | ಟಿ. ಚಂದ್ರರಾಜ ಶೆಟ್ಟಿ | 0 | 4 |
| 60–61 | ಡಾ। ಹರ್ಡಿಕರ (ಪರಿಚಯ) | ನಾಗೇಶ ರಾಮಚಂದ್ರ ದೇಸಾಯಿ | 0 | 5 |
| 62–63 | ತೆಂಗಿನ ತವರು (ಜಿಲ್ಲಾ ಪರಿಚಯ) | ಯು. ನಾರಾಯಣ ಭಟ್ | 0 | 6 |
| 64–65 | ಪ್ರಾಯಶ್ಚಿತ್ತ (ನಾಟಕಗಳು) | ಎಂ. ಗೋವಿಂದ ರಾವ್, | 0 | 4 |
| 66 | ಪ್ರಭಾ (ನೀಳ್ಗತೆ) | ಕು। ಪದ್ಮಾ | 0 | 4 |
| 67–68 | ಶವಗಳ ಸಾಗಾಟ (ಪತ್ತೇದಾರಿ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 12 |
| 69 | ಸ್ವಪ್ನ ಲೋಕ (ಸ್ವಪ್ನಗಳ ಕುರಿತಾದ ವಿವರ] | ಕಾರ್ತಿಕೇಯ | 0 | 8 |
| 70–71 | ಮನೆಯ ಹೊರಗಿನ ಮಹಾಜೀವಗಳು | (ಕು. ಶಿ. ಹರಿದಾಸ ಭಟ್) | 0 | 6 |
| 72–75 | ಘಂಟಮಾರಾ (ಇಟಾಲಿಯನ್ ಕಾದಂಬರಿ) | ,, | 2 | 0 |
| 76–77 | ಮಾರ್ಪಾಟ (ನಾಟಕ) | ಡಾ। ಕೃಷ್ಣ | 0 | 5 |
| 78 | ಭಾರತದ ರಾಷ್ಟ್ರಗೀತೆ | ಟಿ. ಚಂದ್ರ ರಾಜ ಶೆಟ್ಟಿ | 0 | 3 |
| 79 | ಆದರ್ಶ ಆರೋಗ್ಯ ಖಾತೆ | ವಿನಾಯಕ ರಾವ್ ಬಾಪಟ | 0 | 2 |
| 80 | ನಮ್ಮ ಬಹು ದೊಡ್ಡ ಶತ್ರು (ಪ್ರಬಂಧ) | ಕೆ. ಶಿವರಾಮ ಶೆಟ್ಟಿ | 0 | 4 |
| 81 | ಚೌತಿ (ನಾಟಕಗಳು) | | 0 | 4 |
| 82 | ಕತ್ತು ಕೊಯ್ದವರಾರು (ಪತ್ತೇದಾರಿ) | ಕೆ. ಎಸ್. ರಾಮಕೃಷ್ಣ ಮೂರ್ತಿ | 0 | 6 |
| 83 | ಕೈಲಾಸ (ಕತೆ) | ಟಿ. ಚಂದ್ರರಾಜ ಶೆಟ್ಟಿ | 0 | 2 |
| 84 | ಸಮಾಜದ ಅಗ್ನಿಕುಂಡ (ನೀಳ್ಗತೆ) | ಪಡುಕೋಣೆ ವಸಂತಿ ಬಾಯಿ | 0 | 4 |
| 85 | ಬೆಳ್ಳಿ ಹಬ್ಬ (ರಜತೋತ್ಸವ ಸಂಚಿಕೆ) | | 0 | 4 |
| 86 | ಉಷಾ (ಕಾದಂಬರಿ) | ಕು। ಪದ್ಮಾ | 0 | 4 |
| 87 | ವಿಧಿ ಲೀಲೆ (ನೀಳ್ಗತೆಗಳು) | ಜಿ. ಮೈಲಾರ್ರಾವ್ | 0 | 4 |
| 88 | ಪರಮಾಣು ಪ್ರಪಂಚ (ಲಲಿತಪ್ರಬಂಧಗಳು) | ಕೆ. ಗುರುರಾಜ ಉಡುಪ | 0 | 4 |
| 89 | ನೀತಿ ವಿನೋದ ಕತೆಗಳು | ವೀರಪ್ಪ ಯಗಟಿ | 0 | 12 |
| 90 | ಸಾಹಸ ಭೀಮ ವಿಜಯ (ಯಕ್ಷಗಾನ) | ಕೆ. ಪಿ. ವೆಂಕಪ್ಪ ಶೆಟ್ಟಿ | 0 | 8 |
| 91 | ಭಾರತದ ಗುರುಕುಲ ( ,, ) | ,, | 0 | 6 |
| 92 | ಲತ್ತಪಗಡೆ (ಯಕ್ಷಗಾನ) | ,, | 0 | 6 |
| 93 | ಸೇವಾಪಥ (ನಾಟಕ) | ಸೇಟ್ ಗೋವಿಂದ ದಾಸ | 0 | 8 |

95 ಮನೋಪದೇಶ (ಮನಾಚೆ ಶ್ಲೋಕ) ವಿನಾಯಕ ರಾವ್ ಬಾಪಟ 0 6
96 ಜೀವನ ಕಲೆ (ಬಾಳ ಕೈದೀವಿಗೆ) ಗ. ನಾ. ಪಂಡಿತ 0 10
97 ಪ್ರತಿಜ್ಞಾಪೂರ್ತಿ (ನಾಟಕ) ಸುಬ್ರಾವ್ ಕೃಷ್ಣ ಹೆಗ್ಡೆ 0 12
98 ಮಿತ ಸಂತತಿ (ಸಂತತಿ ಸಂಯಮನ) 0 6
99 ಗುಪ್ತರೋಗ ನಿವಾರಣೆ (ಸ್ತ್ರೀಪುರುಷರ ಆರೋಗ್ಯ ರಕ್ಷಣೆಯ ಕೈಪಿಡಿ) 0 8
100 ಸೌಂದರ್ಯ (ಕತಾಚಿತ್ರಗಳು) ವೈ. ರಾಮ ತಂತ್ರಿ 0 8
101 ಸುಧಾ (ಕಾದಂಬರಿ) ಬಿ. ಪದ್ಮಾ ಬಾಳಿಗ 0 8
102 ವಸಂತಕಾಲ (ಲಲಿತ ಪ್ರಬಂಧಗಳು) ಕೆ. ಗುರುರಾಜ ಉಡುಪ 0 6
103 ನವೀನ ನಾಟಕಗಳು (ನಾಟಕ ಸಂಗ್ರಹ) 0 7
104 ಪರ್ಲ್ ಎಸ್. ಬಕ್ (ಜೀವನ ಚರಿತ್ರೆ) ಯು. ನಾರಾಯಣ ಭಟ್ 0 7
105 ಶಿಲ್ಪಿ (ಐತಿಹಾಸಿಕ ನಾಟಕ) ಮುಲಿಮನೆ ಕಾಳೆ ತಿಮ್ಮಪ್ಪ ಹೊಸಮನೆ 1 8
106 ವಾಲಿ ಸುಗ್ರೀವ (ಯಕ್ಷಗಾನ) ಕೆ. ಪಿ. ವೆಂಕಪ್ಪ ಶೆಟ್ಟಿ 0 8
107 ಪಂಚಾರತಿ (ನಾಟಕ ಸಂಗ್ರಹ) 0 8

## * ಇತರ ಪುಸ್ತಕಗಳು *

1 ನೆನಪಿಗಾಗಿ (ಪ್ರಬಂಧಗಳು) ಕೊರಡ್ಕಲ್ ಸ್ಮಾರಕ ಗ್ರಂಥ 2 0
2 ಸುಲಭದಲ್ಲಿ ಇಂಗ್ಲಿಷ್ (ಇಂಗ್ಲಿಷ್ ಸ್ವಯಂಬೋಧಿನಿ) 1 8
3 ಏಶಿಯದ ಸಂಪತ್ತು (ಕು. ಶಿ. ಹರಿದಾಸ ಭಟ್) 2 0
4 ಪ್ರತೀಕಾರ (ನಾಟಕ) ರಂಗನಾಥ 0 8
5 ಶಂಭುಕ ವಧೆ ನಾಟಕ) ಎನ್. ಎಸ್. ಜೈನಿ 0 2
6 ಮುಗುಳು (ಪದ್ಯಸಂಗ್ರಹ) ಕೆ. ಹೊನ್ನಯ್ಯ ಶೆಟ್ಟಿ 0 6
7 ಸರಸ್ವತಿ (ನಾಟಕ) ಡಾ| ಎಂ. ಮಾಧವಾಚಾರ್ಯ 0 12
8 ಬದುಕು ಬಂಗಾರ (ಕುಮಾರಸ್ವಾಮಿ) 1 8
9 ವೈಯಕ್ತಿಕ ಆರೋಗ್ಯ ವಿನಾಯಕ ರಾವ್ ಬಾಪಟ 0 2
10 ಗೀತೆಯ ಕೈಗನ್ನಡಿ ಹೊಸಕೆರೆ ಚಿದಂಬರಯ್ಯ 0 8
11 ವ್ಯವಹಾರಜ್ಞಾನ ದರ್ಪಣ 1 8
12 ವತ್ಸಲಾ (ಕಾದಂಬರಿ) ಮಟ್ಪಾಡಿ ಕಮಲಾಕ್ಷಿ 0 8
13 ಅಳಿಯ ಸಂತಾನ ಕಾನೂನು 0 8
14 ಪ್ರೇಮ ಪ್ರವಾಹ (ಕಥಾ ಸಂಗ್ರಹ) 0 8
15 ಪಂಚಗಜ್ಜಾಯ (ನೀಳ್ಗತೆಗಳ ಸಂಗ್ರಹ 1 8
16 ಅವಿಲು (ಸಾಹಿತ್ಯದ ಸರ್ವ ವಿಧದ ಸಂಗ್ರಹ) 2 0
17 ಹೆಂಗುಸರ ಕತೆಗಳು (ಸ್ತ್ರೀಯರಿಂದಲೇ ಬರೆಯಲ್ಪಟ್ಟ ಕತೆಗಳು) 2 0
18 ಧನದ ಬಿಂದಿಗೆ ಮತ್ತಿತರ ನಾಟಕಗಳು 1 8
19 ಗೋಳಿನ ಬಾಳು (ಕಾದಂಬರಿ, ಪಿ. ದಯಾನಂದ ನ್ಯಾಕ 0 8
20 ಭಾರತದ ಕರ್ಣ ಎನ್. ಎಸ್. ಕಿಲ್ಲೆ 0 6
21 ಪ್ರಾಚೀನ ತುಳುನಾಡು ,, 2 0
22 ಮುರಲಿ ,, 0 12
23 ಹರಿಭಕ್ತಿಸಾರ 0 2

---

ಸಿಗುವ ಸ್ಥಳಗಳು:—1) ನವಯುಗ ಪ್ರೆಸ್, ಉಡುಪಿ,
2) ನವಭಾರತ ಪುಸ್ತಕ ಭಂಡಾರ, ಉಡುಪಿ